ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೪೭ ಡಿಸೆಂಬರ್ ೨೦೧೧ ಸಂಚಿಕೆ : ೧೨



ನವಲುಂಗದದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಹಾಗೂ ಪೌರಸನ್ಮಾನ ಕಾರ್ಯಕ್ರಮವನ್ನು ಹರಗುರು ಚರಮೂರ್ತಿಗಳ ಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು. ವೇದಿಯಲ್ಲಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಪೂಜ್ಯ ಶ್ರೀ ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು, ಗವಿಮಠದ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು, ಶಾಸಕರಾದ ಶ್ರೀ ಶಂಕರಪಾಟೀಲ ಮುನಿನಕೊಪ್ಪ ಮೊದಲಾದ ಗಣ್ಯರು ಉಪಸ್ಥಿತರಿದ್ದರು



ನವಲಗುಂದದಲ್ಲಿ ನಡೆದ ಗುರುವಂದನಾ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ ಮಾಡಲಾಯಿತು. ಈ ಸಂದರ್ಭದಲ್ಲಿ ಹಿರಿಯ ವಕೀಲರಾದ ಶ್ರೀ ಎಂ. ಶಿವಪ್ಪ, ಶ್ರೀ ಜಿ.ಜಿ. ದೊಡ್ಡವಾಡ, ಡಾ. ಎಸ್.ಎನ್. ಒಡೆಯರ್ ಮುಂತಾದವರು ಉಪಸ್ಥಿತರಿದ್ದರು



ಕೇಂದ್ರ ಸಚಿವರಾದ ಶ್ರೀ ಎಂ. ವೀರಪ್ಪ ಮೊಯಿಲಿ ಅವರು ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೭ ಡಿಸೆಂಬರ್ ೨೦೧೧ ಸಂಚಿಕೆ : ೧೨

## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಇಚ್ಛಾಶಕ್ತಿ

ಆತ್ಮೀಯರೇ,

ನಲವತ್ತೇಳನೆಯ ಸಂಪುಟದ ಕೊನೆಯ ಸಂಚಿಕೆಯನ್ನು ನಿಮ್ಮ ನೆರವಿನ ಹಸ್ತದಲ್ಲಿಡಲಾಗುತ್ತಿದೆ. ಇಲ್ಲಿಯವರೆಗೆ ನೀವು ನೀಡುತ್ತ ಬಂದಿರುವ ಸಹಕಾರವನ್ನು ತುಂಬು ಹೃದಯದಿಂದ ಸ್ಮರಿಸಲು ಸಂತೋಷಿಸುತ್ತ ಮುಂಬರುವ ವರ್ಷಗಳಲ್ಲಿ ಸಹಕಾರವನ್ನೇ ಆಶಿಸುತ್ತದೆ.

ಮೊನ್ನೆ, ಮೂವರು ಮಿತ್ರರು ಶ್ರೀಮಠದ ಹಿರಿಯ ವಿದ್ಯಾರ್ಥಿಗಳಾದ ಎಂಬತ್ತು ವರ್ಷಗಳಿಗೂ ಮಿಕ್ಕಿದ ಸನ್ಮಾನ್ಯ ಶ್ರೀ ಆಡಿಟರ್ ಶ್ರೀ ಸಿದ್ಧಗಂಗಯ್ಯ, ಅಂಬಲಗೆರೆ ಅವರನ್ನು ಭೇಟಿ ಮಾಡಿದ ಸಂದರ್ಭದಲ್ಲಿ ಆ ಹಿರಿಯರು ಪತ್ರಿಕೆಯ ಬಗ್ಗೆ ವ್ಯಕ್ತಪಡಿಸಿದ ಮುಕ್ತಕಂಠದ ಪ್ರಶಂಸಾ ನುಡಿಗಳು ಪತ್ರಿಕೆ ಮುಂದೆ ಕ್ರಮಿಸಬೇಕಾದ ದಾರಿಯ ಜವಾಬ್ದಾರಿಯನ್ನು ತಿಳಿಸಿದಂತಾಯಿತು. ಶ್ರೀಮಠದ ಮುಖವಾಣಿಯಾದ 'ಸಿದ್ಧಗಂಗಾ' ಪತ್ರಿಕೆ ಪ್ರತಿ ತಿಂಗಳು ಏನಿಲ್ಲವೆಂದರೂ ಹತ್ತುಸಾವಿರಕ್ಕೂ ಹೆಚ್ಚು ಜನಕ್ಕೆ ಶ್ರೀಮಠದ ಸೇವೆಯನ್ನು ತಿಳಿಸುತ್ತಿರುವುದು ಸಾಮಾನ್ಯ ವಾದುದೇನಲ್ಲ. ಪತ್ರಿಕೆಗಾಗಿ ದುಡಿಯುತ್ತ ಬಂದ ಸಂಪಾದಕರೆಲ್ಲ ಸ್ಮರಣೀಯರು – ಎಂದರಲ್ಲದೆ ಪರಮಪೂಜ್ಯ ಶ್ರೀ ಶ್ರೀಗಳವರ ಆಶಯಗಳಿಗೆ ಅಕ್ಷರ ರೂಪ ಕೊಡುತ್ತಿರುವ ಯೋಜನೆಯೇ ಮಾಸಪತ್ರಿಕೆ ಎಂಬ ಅಭಿಪ್ರಾಯದ ನುಡಿಗಳನ್ನಾಡಿದರು. ರಾಜ್ಯದ ಹಿರಿಯ ರಾಜಕೀಯ ಮುತ್ಸದ್ಧಿಗಳಲ್ಲಿ ಒಬ್ಬರಾದ ಶ್ರೀ ಬಿ.ಬಿ. ಶಿವಪ್ಪನವರು ಒಮ್ಮೆ ದೂರವಾಣಿಯ ಮೂಲಕ ಸಂಪರ್ಕಿಸಿ ಪತ್ರಿಕೆಯ ನಿರ್ಭೀತ ಅಭಿಪ್ರಾಯವನ್ನು ಮೆಚ್ಚಿ ಮಾತಾಡಿದರು. ಇನ್ನೊಮ್ಮೆ ಹಳೆಯ ವಿದ್ಯಾರ್ಥಿ ಸಂಘ ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿಗಳೂ, ಎಸ್.ಐ.ಟಿ.ಯ ನಿರ್ದೇಶಕರೂ ಆಗಿರುವ ಡಾ॥ ಎಂ.ಎನ್. ಚನ್ನಬಸಪ್ಪನವರು ಸಂಘದ ಕಾರ್ಯಕಾರಿ ಸಮಿತಿಯಲ್ಲಿಯೇ ಪತ್ರಿಕೆಯ ಸೆಪ್ಟೆಂಬರ್ ತಿಂಗಳ ಸಂಚಿಕೆಯ ಮಹತ್ವವನ್ನು ಮೆಚ್ಚಿ ಮುಕ್ತಕಂಠದಿಂದ ಪ್ರಶಂಸಿದರು. ಪ್ರೊ. ಕೆ.ಎಚ್. ಉದ್ದಂಡಪ್ಪ, ನಿವೃತ್ತ ಪ್ರಿನ್ಸಿಪಾಲರು, ಪತ್ರಿಕೆ ತುಂಬಾ ಮೌಲಿಕವಾಗಿ ಪ್ರಕಟವಾಗುತ್ತಿದೆ ಎಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಎಲ್ಲರಿಗೂ ಶರಣಾರ್ಥಿಗಳು.

ಆತ್ಮೀಯರೇ, ಪತ್ರಿಕೆಯ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುವುದರ ಜೊತೆಗೆ, ಮುಂದೆ ಹೇಗೆ ಸೇವಾಮುಖಿ ಯಾಗಬೇಕು ಎಂಬ ಸಲಹೆಗಳನ್ನು ಬೇಡುವುದಲ್ಲದೆ, ತಿದ್ದಿಕೊಳ್ಳಬೇಕಾದುದರ ಕಡೆಗೆ ಮಾರ್ಗದರ್ಶನವನ್ನು ಅಪೇಕ್ಷಿಸುತ್ತದೆ.

ಪರಮಪೂಜ್ಯ ಶ್ರೀ ಶ್ರೀಗಳೀರ್ವರ ಗುರುರಕ್ಷೆಯಲ್ಲಿ ನಲವತ್ತೆಂಟನೆಯ ಸಂಪುಟದತ್ತ ಹೆಜ್ಜೆಯಿಡುತ್ತಿದೆ ಪತ್ರಿಕೆ. ಈ ಸಂದರ್ಭದಲ್ಲಿ ಶ್ರೀಮಠದಲ್ಲಿ ನಡೆಯುತ್ತಿರುವ ಕೆಲವು ಸಭೆ, ಸಮಾರಂಭ, ಉತ್ಸವ, ಗೋಷ್ಠಿ ಪ್ರದರ್ಶನ ಮುಂತಾದುವುಗಳನ್ನು ನಿಮ್ಮ ಗಮನಕ್ಕೆ ತರಬಯಸುತ್ತದೆ. ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ, ಸಾಂಸ್ಕೃತಿಕ ಸಂವಹನ ಸಮಾವೇಶ, ಪೂಜ್ಯ ಶ್ರೀ ಅಟವೀ ಮಹಾಸ್ವಾಮಿಗಳವರ ಮತ್ತು ಶ್ರೀ ಉದ್ದಾನಮಹಾಸ್ವಾಮಿಗಳವರ ಸ್ಮರಣೋತ್ಸವ, ನವರಾತ್ರಿ ಸಂದರ್ಭದಲ್ಲಿ ನಡೆಯುವ ವಿಜಯದಶಮಿ ಉತ್ಸವ, ಜಾತ್ರಾ ಸಂದರ್ಭದಲ್ಲಿ ಜರುಗುವ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ, ಸಂಸ್ಕೃತ ಕಾಲೇಜಿನ ಸಂಸ್ಕೃತೋತ್ಸವ, ಹುಣ್ಣಿಮೆ ಪ್ರವಚನ, ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಸಮಾರಂಭ, ಗ್ರಾಮಾಂತರ ಬಸವ ಜಯಂತಿಗೆ ಸಂಬಂಧಿಸಿದಂತೆ ವಿವಿಧ ಜಿಲ್ಲೆಗಳ ಗ್ರಾಮಗಳಲ್ಲಿ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನ, ಶ್ರೀ ಶ್ರೀಗಳವರ ಶತಮಾನೋತ್ಸವ ಸ್ಮರಣಾರ್ಥ ಕ್ರೀಡಾ ಮಹೋತ್ಸವ, ಗಣಪತಿ ಹಬ್ಬ, ಸನಿವಾಸ ವಿದ್ಯಾಸಂಸ್ಥೆಗಳ ವಿದ್ಯಾರ್ಥಿ ಸಂಘಗಳ ಉದ್ಘಾಟನೆ ಮತ್ತು ಮುಕ್ತಾಯ ಸಮಾರಂಭಗಳು, ಗಣ್ಯಮಾನ್ಯ ಸಾಧಕರು ಶ್ರೀಮಠಕ್ಕೆ ಭೇಟಿ ಕೊಟ್ಟಾಗ ನಡೆಯುವ ವಿಶೇಷ ಉಪನ್ಯಾಸಗಳೂ,- ಹೀಗೆ ವರ್ಷದುದ್ದಕ್ಕೂ ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಮತ್ತು ವೈಜ್ಞಾನಿಕ ವಿಚಾರಗಳನ್ನು ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಹತ್ತು ಸಾವಿರ ಮಕ್ಕಳಿಗಾಗಿ, ಅಭಿಮಾನಿಗಳಿಗಾಗಿ, ಗ್ರಾಮೀಣ ಹಾಗೂ ನಗರ ಬಂಧು ಭಗಿನಿಯರಿಗಾಗಿ ವ್ಯವಸ್ಥೆ ಮಾಡಲಾಗುತ್ತಿದೆ.

ಬಂಧುಗಳೇ,

ಜಗದ ಅಚ್ಚರಿಯೆನಿಸಿರುವ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಮಾರ್ಗದರ್ಶನದಲ್ಲಿ ಪ್ರಕಟವಾಗುತ್ತಿರುವ ಮಾಸಪತ್ರಿಕೆ 'ಸಿದ್ಧಗಂಗಾ'ದ ಸೇವಾಮಣಿಹದಲ್ಲಿ ಸಹಕರಿಸುತ್ತಿರುವ ಲೇಖಕರನ್ನು, ಜಾಹಿರಾತುದಾರರನ್ನು, ಆಜೀವ ಸದಸ್ಯರನ್ನು, ವಾರ್ಷಿಕ ಚಂದಾದಾರರನ್ನು, ಸಂಪಾದಕ ಮಂಡಳಿ ಸದಸ್ಯರನ್ನು, ಪ್ರಕಾಶಕರನ್ನು, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘವನ್ನು, ಮುದ್ರಣಕಾರರನ್ನು, ಸದಸ್ಯರ ಸಂಗ್ರಹದಲ್ಲಿ ಕೈಜೋಡಿಸುತ್ತಿರುವ ಮಿತ್ರರನ್ನು, ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇನೆ.

–ಸಂಪಾದಕ







## ಕ್ರಿಯಾಶೀಲತೆ

'ಬಡವರ ಉದ್ಧಾರ ಬಡವರ ಉದ್ಧಾರ'–ವೇದಿಕೆಗಳಿಂದ ನಿತ್ಯವೂ ಕೇಳಿ ಬರುತ್ತಿರುವ ಘೋಷಣೆ. ಒಂದೊಂದು ವೇದಿಕೆಯಿಂದ ಒಂದೊಂದು ರೀತಿಯಲ್ಲಿ ಒಬ್ಬೊಬ್ಬ ನಾಯಕರಿಂದ ಅಂದರೆ ಜನಪ್ರತಿನಿಧಿಗಳೆನಿಸಿಕೊಂಡವರಾದ ಶಾಸಕರು, ಸಂಸದರು, ಸಚಿವರು ಹಲವು ಹನ್ನೊಂದು ಸಮಾಜದ ಮುಖಂಡರುಗಳಿಂದ ಕೇಳಿ ಬರುತ್ತಿರುವ ಅತ್ಯಂತ ಅಪ್ಯಾಯಮಾನವೆನಿಸುವ ಬಡವರ ಉದ್ಧಾರದ ಚಿಂತನೆ. ಆದರೆ ಆದ, ಆಗಿರುವ, ಆಗುತ್ತಿರುವ ಬಡವರ ಉದ್ಧಾರವೆಷ್ಟೆಂಬುದನ್ನು ಲೆಕ್ಕ ಹಾಕಿದಾಗ ಆಗುವ ನೋವು ಅಪಾರ. ಬಣ್ಣ ಬಣ್ಣದ ಮಾತುಗಳಿಂದ ಬಡವರ ಹೊಟ್ಟೆ ತುಂಬಿಸಲಾಗದು, ಮೈಗೆ ಬಟ್ಟೆ ಹೊದಿಸಲಾಗದು. ಜನರನ್ನು ಕ್ರಿಯಾಶೀಲರನ್ನಾಗಿಸುವ ಪ್ರಯತ್ನ ಮಾಡಬೇಕು. ನಮ್ಮ ಹಿಂದಿನ ಹಿರಿಯರು ಹೇಳುತ್ತಿದ್ದುದು ನೆನಪಾಗುತ್ತದೆ. 'ಕೂತು ಉಣ್ಣುವವನಿಗೆ ಕುಡಿಕೆ ಹಣ ಸಾಲದು' ಎಂಬ ಗಾದೆ. ರೂಪಿಸುವ ಯೋಜನೆಗಳು ಜನರನ್ನು ದುಡಿದು ಉಣ್ಣುವಂತೆ ಪ್ರೇರೇಪಿಸುವಂತಿರಬೇಕು. ಒಂದು ದಿನ ದುಡಿದು ಒಂದು ವಾರ ಕುಳಿತುಕೊಳ್ಳು ವುದಾಗಿರಬಾರದು. ಅಂತಹವುಗಳಿಂದ ಮೈನಗಳೆರಡೂ ತುಕ್ಕು ಹಿಡಿಯುತ್ತವೆ. ಹೇಳುವವರು ನಿರ್ದೋಷಿಗಳಾಗಿರಬೇಕು. ಕಳ್ಳರ ಸಂತೆಯಲ್ಲಿ ಸುಳ್ಳು ಹೇಳುವವರು ಸೇರಿದಂತಾಗಬಾರದು. ಸರ್ಕಾರ ರೂಪಿಸುವ ಯೋಜನೆಗಳ ಉದ್ದೇಶ ಒಳ್ಳೆಯದೇ ಇರಬಹುದು. ಆದರೆ ಅದರ ಆಚರಣೆಯಲ್ಲಿ ಅನುಷ್ಠಾನದಲ್ಲಿ ಭಾಗವಹಿಸುವವರೆಲ್ಲ ಪರಹಿತ ಚಿಂತರಾಗಿರಬೇಕಲ್ಲ? ಬಡವರ ಬಾಳು ಹಸನಾಗಬೇಕೆಂದು ಸಹಕರಿಸು ವವರಾಗಬೇಕಲ್ಲ. ಇಂದು ದಿನ ಬೆಳಗಾದರೆ ದಿನಪತ್ರಿಕೆಗಳು, ಟಿ.ವಿ.ಗಳು ಪ್ರಸಾರ ಮಾಡುತ್ತಿರುವ ಸುದ್ದಿಗಳು ಬಡವರ ಉದ್ಧಾರಕ್ಕಿಂತಲೂ ದಿನಕಳೆಯುವುದರೊಳಗೆ, ಅಧಿಕಾರ ಮುಗಿಯುವುದರೊಳಗೆ ಏನು ಮಾಡಿಕೊಳ್ಳಬಹುದು? ಎಷ್ಟು ಮಾಡಿ ಕೊಳ್ಳಬಹುದು? ಮಾಡಿಕೊಂಡಿರುವುದನ್ನು ಹೇಗೆ ಉಳಿಸಿಕೊಳ್ಳಬಹುದು? ಎಂಬ ಆಲೋಚನೆಯಲ್ಲಿಯೇ ಇರುವಾಗ ಬಡವರ ಉದ್ಧಾರ ಆಗುವುದಾದರೂ ಹೇಗೆ?

❖

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಅನಾದಿಗಣೇಶ್ವರನ ಶಿಷ್ಯ ಆದಿಗಣೇಶ್ವರ*
*ಆದಿಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ*
*ನಿರ್ಮಾಯನೆಂಬ ಗಣೇಶ್ವರನ ಶಿಷ್ಯ ನಿರಂಜನನೆಂಬ ಗಣೇಶ್ವರ*
*ನಿರಂಜನನೆಂಬ ಗಣೇಶ್ವರನ ಶಿಷ್ಯರು ಜ್ಞಾನಾನಂದನೆಂಬ ಗಣೇಶ್ವರನು*
*ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯರು ಆತ್ಮಗಣೇಶ್ವರರು*
*ಆತ್ಮಗಣೇಶ್ವರನ ಶಿಷ್ಯರು ಆಧ್ಯಾತ್ಮ ಗಣೇಶ್ವರ*
*ಆಧ್ಯಾತ್ಮಗಣೇಶ್ವರನ ಶಿಷ್ಯರು ರುದ್ರನೆಂಬ ಗಣೇಶ್ವರ*
*ರುದ್ರನೆಂಬ ಗಣೇಶ್ವರನ ಶಿಷ್ಯರು ಬಸವಪ್ರಭುದೇವರು*
*ಬಸವಪ್ರಭುದೇವರ ಶಿಷ್ಯರು ಆದಿಲಿಂಗದೇವರು*
*ಆದಿಲಿಂಗದೇವರ ಶಿಷ್ಯರು ಚೆನ್ನವೀರೇಶ್ವರ ದೇವರು*
*ಚೆನ್ನವೀರೇಶ್ವರದೇವರ ಶಿಷ್ಯರು ಹರದನಹಳ್ಳಿಯ ಗೋಸಲದೇವರು*
*ಹರದನಹಳ್ಳಿಯ ಗೋಸಲದೇವರ ಶಿಷ್ಯರು ಶಂಕರದೇವರು*
*ಶಂಕರದೇವರ ಶಿಷ್ಯರು ದಿವ್ಯಲಿಂಗದೇವರು*
*ದಿವ್ಯಲಿಂಗದೇವರ ಶಿಷ್ಯರು ಚೆನ್ನಬಸವೇಶ್ವರ ದೇವರು*
*ಚೆನ್ನಬಸವೇಶ್ವರ ದೇವರ ಕರಕಮನದಲ್ಲಿ ಉತ್ಪತ್ತಿಯಾದ ಶಿಶು*
*ಸಿದ್ಧಲಿಂಗ ನಾನಯ್ಯ, ಹೀಂಗೆ ಅನಾದಿವಿಡಿದು ಬಂದ ಗುರು*
*ಅನಾದಿವಿಡಿದು ಬಂದ ಲಿಂಗ*
*ಅನಾದಿವಿಡಿದು ಬಂದ ಜಂಗಮ*
*ಅನಾದಿವಿಡಿದು ಬಂದ ಗುರು-ಶಿಷ್ಯ ಸಂಬಂಧ*
*ಅನಾದಿವಿಡಿದು ಬಂದ ಪಾದೋದಕ-ಪ್ರಸಾದ*
*ಅನಾದಿವಿಡಿದು ಬಂದ ಭಕ್ತಿ ಜ್ಞಾನವೈರಾಗ್ಯ*
*ಅನಾದಿ ಸಂಸಿದ್ಧವಾದ ವೀರಶೈವಾಚಾರ ಸಂಪತ್ತು*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಪ್ರಸ್ತುತ ವಚನದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು ತಮ್ಮ ಗುರು ಶಿಷ್ಯ ವಂಶಾವಳಿಯನ್ನು ತಿಳಿಸುತ್ತಾ ಗುರುಲಿಂಗ ಜಂಗಮ, ಗುರು-ಶಿಷ್ಯ, ಪಾದೋದಕ ಪ್ರಸಾದ, ಭಕ್ತಿ ಜ್ಞಾನ ವೈರಾಗ್ಯಗಳು ವೀರಶೈವಾಚಾರದ ಸಂಪತ್ತು ಎಂಬುದನ್ನು ತಿಳಿಸುತ್ತಾರೆ.

(ಕೃಪೆ : ಸಂಕೀರ್ಣದ ವಚನ ಸಂಪುಟ -6, ಕರ್ನಾಟಕ ಸರ್ಕಾರ, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ತನುವ ಸಣ್ಣಿಸು ಎಂದೆ ಮನವ ಮಣ್ಣಿಸು ಎಂದೆ
ಅನುದಿನ ಜಾಗರದಿ ನಡೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಾಂಗ ನಿರ್ಮೋಹಿ ನಿಃಕಾಮಿ ನಿಜಗುಣ
ನಿತ್ಯ ನಿರಂಜನ ನಿರುಪಮ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಲಿಂಗದೊಳು ನೋಡುವ ಲಿಂಗದೊಳು ಕೇಳುವ
ಲಿಂಗಮುಟ್ಟಿದರೆ ಮುಟ್ಟುವ' । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಲಿಂಗದೊಳು ರುಚಿಸುವ ಲಿಂಗದೊಳು ಪ್ರೀತಿಸುವ
ಲಿಂಗದೊಳು ವಾಸಿಸುವ ಪರಿಣಾಮಿ' । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮುವ ನರಿಯದೆ ಏನರಿದು ಫಲವೇನು
ನಿಮ್ಮುವ ವಿನಯವೆ ಶಿವಭಾನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದಾಸೋಹವೆ ತವಪ್ರಾಣ ಪ್ರಾಣವೆ ದಾಸೋಹ'
ದಾಸೋಹವೆ ನಿಜಪ್ರಾಣ ಕರಲಿಂಗ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ನಿಮ್ಮ ಪರಿಣಾಮದ ಸುಖವ ನೀ ಬಲ್ಲೆಯ್ಯೆ
ನಿಮ್ಮೊಡನಿರುವ ನಾ ಬಲ್ಲೆನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಲಿಕಲ್ಲಿನಗೊಂಬೆ ಅಗ್ನಿಯನಪ್ಪಿದೊಲು
ನಾನಿಮ್ಮ ಚರಣವಪ್ಪಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಘನವೆ ನೀವಾಗಿದ್ದು ನುಡಿ ನಡೆದು ನಗುತಿರಲು
ಬರಿಯ ವಿಚಾರಕೆ ನಿಲುಕುವುದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹತ್ತುಸಾವಿರ ಪದವ ಸತ್ಯಚರಣದೊಳಿಟ್ಟು
ನಿತ್ಯ ನಿಜಪದವ ಬೇಡುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**





## ಬಸವಣ್ಣನವರ ಅಂತರಂಗ ಬಹಿರಂಗ ಶುದ್ಧಿ

-ಪ್ರೊ. ಎಸ್. ಉಮಾಪತಿ *

*'ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯಾ!*
*ಅಘೋರ ತಪವ ಮಾಡಿದೊಡೇನು!*
*ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವರಯ್ಯಾ!'*

*'ಅರತಡಗದು ಕ್ರೋಧ ತೊಲಗದು ಕ್ರೂರ ಕುಭಾಷೆ*
*ಕುಹಕ ಬಿಡದನ್ನಕ್ಕ ನೀನೆತ್ತಲು ಶಿವನೆತ್ತಲು*
*ಹೋಗತ್ತ ಮರುಳೆ!'*

*'ಮನವೇ ಸರ್ಪ ತನುವೇ ಹೇಳಿಗೆ*
*ಹಾವಿನೊಡತಣ ಹುದುವಾಳಿಗೆ, ಇನ್ನಾವಾಗ*
*ಕೊಂದಹುದೆಂದರಿಯೆ, ಇನ್ನಾವಾಗ ತಿಂದಹುದೆಂದರಿಯೆ!*
*ನಿಚ್ಚಕ್ಕೆ ನಿಮ್ಮ ಪೂಜಿಸ ಬಲ್ಲೊಡೆ ಅದೇ ಗಾರುಡ'*

ಜೀವನದಲ್ಲಿ ಮಾನವನಿಗೆ ಅಂತರಂಗ ಬಹಿರಂಗ ಶುದ್ಧಿ ಬಹುಮುಖ್ಯ. ಅವನ ಸರ್ವತೋಮುಖವಾದ ಅಭಿವೃದ್ಧಿಗೆ ಅದು ಅವಶ್ಯಕ. ಇಹಪರ ಸಾಧನೆಗಂತೂ ಅದು ಬೇಕೇ ಬೇಕು, ಇದಕ್ಕೆ ಧ್ಯಾನ ತಪ ಜಪ ಪೂಜೆ ಆರಾಧನೆ ಸ್ತೋತ್ರ ಸಾಧನಗಳು. ಕೇವಲ ದೈಹಿಕವಾಗಿ ಶುದ್ಧಿಯಾದರೆ ಸಾಲದು. ಕರಣೇಂದ್ರಿಯಗಳನ್ನು ನಮ್ಮ ಹಿಡಿತದಲ್ಲಿಟ್ಟುಕೊಂಡು ಸಂಯಮ ಸದಾಚಾರಗಳನ್ನು ಸಾಧಿಸಿಕೊಳ್ಳಬೇಕು. ಮನಸ್ಸು ನಮ್ಮ ಜೀವನದ ಚಟುವಟಿಕೆಗಳನ್ನು ನಿಯಂತ್ರಿಸುತ್ತದೆ. ಕಾರಣ ಮನಸ್ಸು ಶುದ್ಧವಾಗಿ ಪರಿಪಕ್ವವಾಗಿರಬೇಕು. ಬಸವಣ್ಣನವರು ಈ ಮನ ಮತ್ತು ದೇಹ ಸಂಬಂಧವನ್ನು ತಮ್ಮ ವಚನಗಳಲ್ಲಿ ತುಂಬಾ ಸಮರ್ಪಕವಾಗಿ ವಿವರಿಸಿದ್ದಾರೆ. ಮನವು ಚಂಚಲ, ಅದು ಆಸೆಗೆ ಬಲಿಯಾಗುವುದು ಸಹಜ. ಮನವು ಸಾಮಾನ್ಯವಾಗಿ ದುಷ್ಟತನಕ್ಕೆ ಎಳಸುತ್ತದೆ. ಕಾರಣ ಅದನ್ನು ಒಂದು ಸರ್ಪಕ್ಕೆ ಹೋಲಿಸಿದ್ದಾರೆ. ವ್ಯಕ್ತಿಯು ಪೂಜೆ ಆರಾಧನೆ ಜಪ ತಪ ಮುಂತಾದವುಗಳಿಂದ ಮನವನ್ನು ಪಳಗಿಸಿ ಅಂತರಂಗ ಬಹಿರಂಗ ಶುದ್ಧಿಯನ್ನು ಪಡೆದುಕೊಳ್ಳಬೇಕೆಂದು, ಅದೇ ಆಮಿಷಕ್ಕೆ ಔಷಧಿ-ಗಾರುಡಿ ಎಂದು ಬಸವಣ್ಣನವರು ಅಭಿಪ್ರಾಯ ಪಟ್ಟಿದ್ದಾರೆ.

ಆದರೆ ಮಾನವನ ತನು ಮನಗಳು ಅವಕ್ಕವೆ ಒಳ್ಳೆಯವು ಅಲ್ಲ, ಕೆಟ್ಟವುಗಳೂ ಅಲ್ಲ. ಮನಸ್ಸು ಮಾಡಿದರೆ ಅವನು ಏನನ್ನಾದರೂ ಸಾಧಿಸಬಲ್ಲ ಎಂಬುದಕ್ಕೆ ಜೀವನದಿಂದ ಇತಿಹಾಸದಿಂದ ಸಾಕಷ್ಟು ಉದಾಹರಣೆಗಳು ದೊರಕುತ್ತವೆ. ಮಾನವನು ತಾನು ಬೆಳೆದು ಬಂದ ಪರಿಸರದ ಶಿಶು. ಪರಿಸರ ವ್ಯಕ್ತಿಯ ಮನಸ್ಸಿನ ಮೇಲೆ ನಡೆ ನುಡಿಯ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರುತ್ತದೆ. ಪಂಚತಂತ್ರದಲ್ಲಿ ಬರುವ ಎರಡು ಗಿಳಿಗಳ ಕಥೆ ಇದಕ್ಕೆ ಉತ್ತಮ ನಿದರ್ಶನವೆನ್ನಬಹುದು. ಅಂಗುಲಿಮಾಲ ಹಾಗೂ ವಾಲ್ಮೀಕಿಗಳ ಉದಾಹರಣೆಯೂ ನಮ್ಮ ಮುಂದೆ ಇದೆ. ಮನುಷ್ಯನು ಒಳ್ಳೆಯವನು ಕೆಟ್ಟವನು ಆಗುವುದಕ್ಕೆ ಅವನು ಬೆಳೆದು ಬಂದ ಪರಿಸರ ಬಹು ಮುಖ್ಯವೆನ್ನಬಹುದು. ಆದುದರಿಂದ ಗಾಂಧೀಜಿಯವರು ಸುಸಂಸ್ಕೃತ ಸಜ್ಜನರ ಗೃಹಕ್ಕೆ ಸಮನಾದ ಶಾಲೆ ಇನ್ನೊಂದಿಲ್ಲ ಸತ್ಯಸಂಧರೂ, ಗುಣವಂತರೂ ಆದ ತಂದೆ ತಾಯಂದರಿಗೆ ಸಮನಾದ ಅಧ್ಯಾಪಕರು ಇನ್ನಿಲ್ಲ ಎಂದಿದ್ದಾರೆ, ಮತ್ತು

*'ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೋ!*
*ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜತುಂಬಿ*
*ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ!*
*ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯ*
*ತುಂಬಿ, ಮನೆಯೊಳಗೆ ಮನೆಯೊಡೆಯನಿಲ್ಲ,*
*ಕೂಡಲಸಂಗಮದೇವಾ!'*

ಬಸವಣ್ಣನವರ ಉತ್ತಮವಾದ ಅನೇಕ ವಚನಗಳಲ್ಲಿ ಇದು ಒಂದು. ಮನೆಯನ್ನು ದೇಹಕ್ಕೂ, ಜೀವಾತ್ಮನನ್ನು ದೇವರಿಗೂ ಹೋಲಿಸಿ ಇಂದು ಉತ್ತಮವಾದ ಪ್ರತಿಮೆಯನ್ನು ಓದುಗರ ಮುಂದೆ ನಿಲ್ಲಿಸಿದ್ದಾರೆ.

ಈ ದೇಹ ಮನೆಯಲ್ಲಿರುವವರು ಸನ್ಮಾರ್ಗಿಗಳಾಗಿ, ಶುಚಿ ರುಚಿ, ಸದಾಚಾರ ವಿಚಾರದಿಂದ ಕೂಡಿದ್ದೆ ಅದರೆ ಹೊಸ್ತಿಲಲ್ಲಿ ಹುಲ್ಲು ಬೆಳೆದು, ಒಳಗೆ ಧೂಳು ತುಂಬಿ

* ದಾವಣಗೆರೆ.

ಬಿಕೋ ಎನ್ನಿಸುವುದಿಲ್ಲ. ಮನೆಗೆ ಬರುವವರನ್ನು ಹಿಂದಕ್ಕೆ ತಳ್ಳಿದಂತಾಗುವುದಿಲ್ಲ, ಸ್ವಾಗತ ಕೋರುತ್ತದೆ.

ಹೀಗಲ್ಲದೆ 'ತನುವಿನೊಳಗೆ ಹುಸಿ ತುಂಬಿ ಮನದೊಳಗೆ ವಿಷಯತುಂಬಿ' ಇದ್ದರೆ ಆ ಮನೆ ದೇವರಿಲ್ಲದ ದೇವಸ್ಥಾನದಂತಾಗುತ್ತದೆ. ಅಂಥ ಮನೆಯೊಳಗಿರುವುದು ಆಕ್ರಮಣಕಾರಿ ದೆವ್ವವೇ ಹೊರತು, ಅನುಗ್ರಹ ಕಾರಿ ದೇವರಲ್ಲ, ಮುಂದುವರಿದು

*'ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತ !*
*ಮೃದುವಚನವೇ ಸಕಲ ಜಪಂಗಳಯ್ಯಾ!*
*ಮೃದು ವಚನವೇ ಸಕಲ ತಪಂಗಳಯ್ಯಾ!*
*ಸದುವಿನಯವೇ ಸದಾಶಿವನೊಲಿಮೆಯಯ್ಯಾ!*
*ಕೂಡಲಸಂಗಯ್ಯ, ನಂತಲ್ಲದೊಲ್ಲನಯ್ಯಾ!'*

ಎಂದು ಮೃದುವಚನಗಳು ದೇವನನ್ನು ಮಾತ್ರವಲ್ಲ ಜನತಾ ದೇವತೆಗಳನ್ನೂ ಒಲಿಸಿಕೊಳ್ಳಬಹುದೆಂದು ವಿವರಿಸಿದ್ದಾರೆ. ಸದುವಿನಯವು ಎಂತಹವರನ್ನಾದರೂ ಒಲಿಸಿಕೊಳ್ಳಬಹುದೆಂದು, ವಿನಯವಂತಿಕೆಗೆ ಅಂತಹ ದಿವ್ಯಶಕ್ತಿಯುಂಟೆಂಬುದು ಅವರ ಅಭಿಮತ.

*'ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ*
*'ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ*
*ತನಗಾದ ಆಗೇನು! ಅವರಿಗಾದ ಚೇಗೇನು'*

ಎಂದು ಬಸವೇಶ್ವರರು ಇಹಲೋಕದಲ್ಲಿ ಮಾನವನ ನಡೆ ನುಡಿಯ ಸಂಹಿತೆಯನ್ನು ಮೇಲಿನ ವಚನಗಳಲ್ಲಿ ಕೊಟ್ಟಿದ್ದಾರೆ.

*ಬೀಸುವ ಗಾಳಿ ಧೂಳಿಯನೆತ್ತಲು ಮಸುಳಿದನೆ ಸೂರ್ಯನು!*
*ಆ ಸೂರ್ಯನಂತೆ ಬೆಳಗುತ್ತಿರವೇಡಾ ಹಿರಿಯರಮನ!*
*ಅನೇಕ ತೆರನ ಯೋನಿ ಮುಖಂಗಳ ಹೊಕ್ಕು*
*ನೀರ ಕುಡಿಯಲು ಹೋದಡೆ ಸುಡು ಹೋಗೆಂದು ನೂಂಕಿತೆ ಜಲ!*
*ಈ ಜಲದಂತಾಗಲು ವೇಡಾ ಹಿರಿಯರ ಮನ!*
*ಮನವಿಚ್ಛಂದವಾಗದೆ ಒಂದೆಯಂದರಿ ಇಪ್ಪಂತಪ್ಪ*
*........ಸಮತಾ ಗುಣ ಎನ್ನನೆಂದು ಪೊಂದಿದ್ದುದು!'*

ಎಂದು ತಮ್ಮ ಆರಾಧ್ಯದೈವದಲ್ಲಿ ಶ್ರೀ ಶಿವಯೋಗಿ ಸಿದ್ಧರಾಮೇಶ್ವರರು ತಮ್ಮ ಅಳಲನ್ನು ಬಿನ್ನವಿಸಿಕೊಂಡಿದ್ದಾರೆ.

ಹೀಗೆ ಪ್ರಕೃತಿಯಂತೆ ಪರಿಶುದ್ಧವಾದ ಪ್ರೀತಿಯ ಪ್ರವಾಹವನ್ನು ನೋಡಿಯಾದರೂ ಮಾನವರು ಕಲಿಯಬೇಕಲ್ಲವೆ. ಪ್ರಕೃತಿ ಹೇಳುವ ಪಾಠವನ್ನಾದರೂ ಗಮನಿಸಿದರೆ ಮನುಕುಲದ ಶ್ರೇಯಸ್ಸು ಸಾಧ್ಯವೆಂದು ತೋರುತ್ತದೆ. ಪ್ರೀತಿಯ ಸಾಮ್ರಾಜ್ಯದಲ್ಲಿ ಎಲ್ಲರೂ ತೇಲಾಡುವಂತಾದರೆ ಅದಕ್ಕಿಂತ ಸ್ವರ್ಗ ಬೇರಿಲ್ಲ, ಮತ್ತು

ಅರಳಿದ ಕುಸುಮಗಳತ್ತ ಹಾತೊರೆದು ಬರುವ ದುಂಬಿಗಳನ್ನು ದ್ವೇಷಿಸಿ ಆ ಪುಷ್ಪಗಳೆಂದಾದರೂ ಮುದುಡಿಕೊಂಡಿದ್ದಿದೆಯೇ! ತುಂಬಿದ ಕೆಚ್ಚಲಿನಿಂದ ಹಾಲು ಹಿಂಡುವ ಗೊಲ್ಲನ ಕೈಗಳನ್ನು ಕಾಮಧೇನು ಸಿಟ್ಟಿನಿಂದ ತುಳಿದು ತುಂಡರಿಸಿದ್ದಿದೆಯೆ! ಜಲರಾಶಿಯಲ್ಲಿ ಒಂದಾಗಿ ವಾಸಿಸುವ ಮೀನುಗಳ ಸಂತತಿಯೊಡನೆ ವೈರ ಸಾಧಿಸಲು ಸಮುದ್ರ ಬತ್ತಿ ಬರಿದಾದದ್ದಿದೆಯೆ! ಬೀಸುವ ಗಾಳಿಯಲ್ಲಿ ಹಾರುವ ಪಕ್ಷಿಗಳನ್ನು ಮಾತ್ಸರ್ಯದ ಜಾಲದಲ್ಲಿ ಕೆಡವಿ ಗಾಳಿ ಸ್ತಬ್ಧವಾದದ್ದಿದೆಯೇ! ಇಲ್ಲ, ಹೀಗೆ ಪ್ರಕೃತಿಯಲ್ಲಿ ನಾವು ನೋಡುವುದು ಪರಿಶುದ್ಧ ಪ್ರೀತಿಯ ಪ್ರವಾಹವನ್ನೇ. ಅದನ್ನು ಅರಿತು ಮಾನವನು ಹೃದಯ ವೈಶಾಲ್ಯತೆಯನ್ನು ಮೆರೆದರೆ ಎಲ್ಲರಿಗೂ ಸುಖಶಾಂತಿ ಲಭಿಸಿ ಆಗ 'ಸರ್ವೇ ಜನಾಃ ಸುಖಿನೋ ಭವಂತು!' ಎಂಬ ಮಾತು ನಿಜವಾಗ ಬಹುದು. ಶರಣರು ಅಂದಿನಿಂದ ಇಂದಿನವರೆಗೂ ಈ ದಿಸೆಯಲ್ಲಿ ದಾರಿದೀಪವಾಗಿದ್ದಾರೆ. ❖

ಎನ್ನ ಗಂಡ ಬರಬೇಕೆಂದು,
ಎನ್ನಂತರಂಗವೆಂಬ ಮನೆಯ ತೆರಹು ಮಾಡಿ,
ಅಷ್ಟದಳವೆಂಬ ಓವರಿಯೊಳಗೆ
ನಿಜನಿವಾಸವೆಂಬ ಹಾಸಿಗೆಯ ಹಾಸಿ,
ಧ್ಯಾನವೆಂಬ ಮೇಲು ಕಟ್ಟಂ ಕಟ್ಟಿ,
ಜ್ಞಾನವೆಂಬ ದೀಪವ ಬೆಳಗಿ,
ನಿಷ್ಠೆಯೆಂಬ ಉಪಕರಣಂಗಳ ಹರಹಿಕೊಂಡು,
ಪಶ್ಚಿಮದ್ವಾರವೆಂಬ ಬಾಗಿಲ ತೆರೆದು,
ಕಂಗಳೆ ಪ್ರಾಣವಾಗಿ ಬರವ ಹಾರುತ್ತಿರ್ದೆನಯ್ಯಾ,
ನಾನು, ಬಾರದಿರ್ದಡೆ ಉಮ್ಮಳಿಸಿಹೆನೆಂದು
ತಾನೆ ಬಂದು, ಎನ್ನ ಹೃದಯ ಸಿಂಹಾಸನದ ಮೇಲೆ
ಮೂರ್ತಗೊಂಡಡೆ, ಎನ್ನ ಬಯಕೆ ಸಯವಾಯಿತ್ತು
ಹಿಂದೆ ಹನ್ನೆರಡು ವರುಷದಲ್ಲಿದ್ದ
ಚಿಂತೆಯಿಂದು ನಿಶ್ಚಿಂತೆಯಾಯಿತ್ತು.
ಕೂಡಲಸಂಗಮದೇವರು ಕೃಪಾಮೂರ್ತಿಯಾದ
ಕಾರಣ, ನಾನು ಬದುಕಿದೆನು.

–ಬಸವಣ್ಣ





# ನಿಮ್ಮ ಉನ್ನತಿ ಅಥವಾ ಪತನ ನಿಮ್ಮ ಕೈಯಲ್ಲಿದೆ

–ನ್ಯಾಯಮೂರ್ತಿ ಡಾ. ಮ. ರಾಮಾ ಜೋಯಿಸ್ *

*ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।*
*ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥*

ಪ್ರತಿಯೊಬ್ಬರು ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳಬಲ್ಲ ಅಥವಾ ತನ್ನನ್ನು ತಾನೇ ಅಧೋಗತಿಗೆ ಕೊಂಡೊಯ್ಯಬಲ್ಲ. ಏಕೆಂದರೆ ಮನುಷ್ಯನಿಗೆ ತನಗೆ ತಾನೇ ಮಿತ್ರನೂ ಮತ್ತು ತನಗೆ ತಾನೇ ಶತ್ರುವೂ ಆಗಿದ್ದಾನೆ. (ಭಗವದ್ಗೀತೆ ೬–೫)

ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಪ್ರಯತ್ನದಿಂದ ಜೀವನದಲ್ಲಿ ಸನ್ಮಾರ್ಗದಲ್ಲಿ ನಡೆದು ಮುಂದೆ ಬರಬಹುದು ಅಥವಾ ದುರ್ಮಾರ್ಗದಲ್ಲಿ ನಡೆದು ತನ್ನ ಜೀವನವನ್ನು ಹಾಳುಮಾಡಿಕೊಳ್ಳಬಹುದು. ಈ ಚಿರಂತನ ಸತ್ಯವನ್ನು ಭಗವದ್ಗೀತೆಯ ಮೇಲ್ಕಂಡ ಶ್ಲೋಕ ವ್ಯಕ್ತಪಡಿಸುತ್ತದೆ.

ಈ ಶ್ಲೋಕದ ಅರ್ಥವನ್ನು ಪ್ರತಿಯೊಬ್ಬ ಶಿಕ್ಷಕನೂ ತಾನು ಮೊದಲು ತಿಳಿದುಕೊಂಡು ವಿದ್ಯಾರ್ಥಿಗಳಿಗೆ ನೀಡುವ ಶಿಕ್ಷಣದಲ್ಲಿ ಅವರ ಮನಸ್ಸಿಗೆ ತಿಳಿಯುವಂತೆ ಹೇಳಬೇಕು. ಅನೇಕರು ಇಂತಹ ನಿರ್ದೇಶನ ಅಥವಾ ಮಾರ್ಗದರ್ಶನದಿಂದ ವಂಚಿತರಾದವರು, ತಮ್ಮ ಅಮೂಲ್ಯವಾದ ಜೀವನದ ಸಮಯವನ್ನು ಒಳ್ಳೆಯ ಕೆಲಸವನ್ನು ಮಾಡದೆ, ಉಪಯುಕ್ತವಾದ ಯಾವ ವಿಷಯವನ್ನೂ ತಿಳಿಯದೆ ಸಮಯವನ್ನು ನಿರರ್ಥಕವಾಗಿ ಕಳೆಯುತ್ತಾರೆ. ಕಳೆದ ಸಮಯ ಮತ್ತೆ ಬರುವುದಿಲ್ಲ. ಆದುದರಿಂದ ಸಮಯವನ್ನು ವ್ಯರ್ಥವಾಗಿ ಕಳೆಯಬಾರದು ಎಂಬುದರ ಅರಿವು ಅವರಿಗೆ ಇರುವುದಿಲ್ಲ. ಇಂತಹ ವ್ಯಕ್ತಿಗೆ ಹಾಗೂ ಸಮಾಜಕ್ಕಾಗುವ ನಷ್ಟ ಅಷ್ಟಿಷ್ಟಲ್ಲ ಮತ್ತು ತನ್ನ ಸ್ವಸಾಮರ್ಥದಿಂದ, ಸ್ವಪ್ರಯತ್ನದಿಂದ ಜೀವನದಲ್ಲಿ ಮುಂದೆ ಬರಬೇಕೆಂಬ ಇಚ್ಛೆಯಾಗಲೀ, ಜ್ಞಾನವಾಗಲಿ ಇರುವುದಿಲ್ಲ. ಇಂತಹ ಮೂಲಭೂತ ವಿಷಯ ಶಾಲಾ ಪೂರ್ವದಲ್ಲಿ ಮತ್ತು ಶಾಲೆಗೆ ಸೇರಿದ ನಂತರ ಶಿಕ್ಷಣದ ಅಂಶವಾಗಬೇಕು. ಇದರ ಅರಿವಾದರೆ, ವ್ಯಕ್ತಿ ತನ್ನ ಸಮಯವನ್ನು ವೃಥಾ ಕಳೆಯದಿರಲು ಜಾಗೃತನಾಗುತ್ತಾನೆ.

ತದ್ವಿರುದ್ಧ, ಸಮಯವನ್ನು ಒಳ್ಳೆಯ ವಿಷಯಗಳಿಗಾಗಿ ಉಪಯೋಗಿಸದೆ ವ್ಯರ್ಥವಾಗಿ ಕಳೆಯುವುದಕ್ಕೆ ಸಮಯವನ್ನು ಕೆಟ್ಟ ಕೆಲಸಗಳನು ಮಾಡುವುದರಲ್ಲಾಗಲಿ, ಕೆಟ್ಟ ಚಟಗಳನ್ನು ಕಲಿತು ಅವುಗಳ ಪೂರೈಕೆಗಾಗಲಿ ಉಪಯೋಗಿಸುವ ಅಥವಾ ಕಳೆಯುವ ಯುವಕರ ಸಂಖ್ಯೆ ಜಾಸ್ತಿಯಾಗುತ್ತಿದೆ. ಇದರಿಂದ ವ್ಯಕ್ತಿಗೆ ಮತ್ತು ರಾಷ್ಟ್ರಕ್ಕೆ ಆಗುವ ಅಪಾರ ನಷ್ಟವನ್ನು ಅಳೆಯುವುದು ಅಸಾಧ್ಯ. ಇವುಗಳಿಂದಾಗಿ ಪರಮಾತ್ಮ ನೀಡಿರುವ ಶರೀರ ಶಕ್ತಿಯ ಹಾಗೂ ಬುದ್ಧಿ ಶಕ್ತಿಯ ಹ್ರಾಸವಾಗುತ್ತಿದೆ.

ಈ ರೀತಿ ಯುವಕ ಯುವತಿಯರ ಹಾಗೂ ಮಕ್ಕಳ ನೈತಿಕ ಹಾಗೂ ಶಾರೀರಿಕ ಶಕ್ತಿಯ ಹ್ರಾಸವಾಗುವುದರ ವಿರುದ್ಧ ಸರ್ಕಾರ ಕ್ರಮ ತೆಗೆದುಕೊಳ್ಳಬೇಕೆಂಬ ನಿರ್ದೇಶನ ಸಂವಿಧಾನದ ೩೯ನೇ ವಿಧಿಯಲ್ಲಿದೆ. ಈ ನಿರ್ದೇಶನದ ಪ್ರಕಾರ, ಯುವಕ, ಯುವತಿಯರ ಹಾಗೂ ಮಕ್ಕಳ ನೈತಿಕ ಹಾಗೂ ಶರೀರದ ಶಕ್ತಿ ಹ್ರಾಸವಾಗುವುದರ ವಿರುದ್ಧ ಎಲ್ಲ ರೀತಿಯ ಕ್ರಮಗಳನ್ನು ತೆಗೆದುಕೊಳ್ಳಬೇಕಾಗಿತ್ತು. ಆದರೆ, ದುರದೃಷ್ಟವಶಾತ್ ಸ್ವಾತಂತ್ರ್ಯ ನಂತರ ಸಂವಿಧಾನದ ಪ್ರಕಾರ ಕೇಂದ್ರದಲ್ಲಿ ಹಾಗೂ ರಾಜ್ಯದಲ್ಲಿ ಅಧಿಕಾರಕ್ಕೆ ಬಂದ ನಾಯಕರು ಮತ್ತು ಪಕ್ಷಗಳು ಈ ಮುಖ್ಯವಾದ ನಿರ್ದೇಶನವನ್ನು ಜಾರಿಗೆ ಕೊಡುವ ವಿಷಯದಲ್ಲಿ ಕರ್ತವ್ಯಚ್ಯುತರಾಗಿದ್ದಾರೆ. ಇದರ ಪರಿಣಾಮವೆಂದರೆ, ಒಳ್ಳೆಯ ವಿದ್ಯೆಯನ್ನು ಕಲಿತು, ಒಳ್ಳೆಯ ಚಾರಿತ್ರ್ಯವನ್ನು ಪಡೆದು ಇಂದ್ರಿಯ ನಿಗ್ರಹ ಶಕ್ತಿಯನ್ನು ಮೈಗೂಡಿಸಿಕೊಂಡು ಕೆಟ್ಟ ಚಟಗಳಿಗೆ ತುತ್ತಾಗದೆ ಸನ್ಮಾರ್ಗದಲ್ಲಿ ನಡೆಯುತ್ತಾ ಜೀವನದಲ್ಲಿ ಅತ್ಯುನ್ನತ ಮಟ್ಟಕ್ಕೆ ಏರಬಹುದು ಅಥವಾ ದುರ್ಮಾರ್ಗ ಹಿಡಿದು ದುಶ್ಚಟಗಳಿಗೆ ತುತ್ತಾಗಿ ಹಣ ಮತ್ತು ಲೈಂಗಿಕ ದುರಾಸೆಗಳಿಗೆ ಒಳಗಾಗಿ ತನ್ನ ಜೀವನವನ್ನು ನಾಶಪಡಿಸಿಕೊಳ್ಳುವಂತಹ ಯುವಕರ ಸಂಖ್ಯೆಯೇ ಜಾಸ್ತಿಯಾಗಿದೆ. ಈ ವಿಷಯವನ್ನೇ ಭಗವದ್ಗೀತೆಯ ಮೇಲೆ ಹೇಳಿರುವ ಶ್ಲೋಕದಲ್ಲಿ ಅಡಕವಾಗಿದೆ.

ಈ ಶ್ಲೋಕದ ಬೆಳಕಿನಲ್ಲಿ ಪ್ರತಿಯೊಬ್ಬರೂ ತಮ್ಮ ನುಡಿ, ನಡತೆಗಳನ್ನು ತಿದ್ದಿಕೊಂಡು ತಮ್ಮನ್ನು ತಾವೇ ಉದ್ಧಾರಮಾಡಿಕೊಳ್ಳಬೇಕಾಗಿದೆ. ಇನ್ನೊಬ್ಬರನ್ನು ದೂರಿ ಪ್ರಯೋಜನವಿಲ್ಲ. ಇನ್ನೊಬ್ಬರು ಜೀವನದಲ್ಲಿ ಮೇಲೇರಲು ಪ್ರಯತ್ನ ಅಥವಾ ಸಹಾಯ ಮಾಡಲಿಲ್ಲವೆಂದಾಗಲಿ ಅಥವಾ ಇನ್ನೊಬ್ಬರು ಮೇಲ್ಬರಲು ಬಿಡಲಿಲ್ಲವೆಂದಾಗಲಿ ತಿಳಿಯುವುದರಿಂದ ಏನೂ ಪ್ರಯೋಜನವಾಗುವುದಿಲ್ಲ. ಇದೇ 'ಪ್ರಯತ್ನವೇ ಪರಮೇಶ್ವರ' ಎಂಬ ಮಾತಿನ ಅರ್ಥ. ಸ್ವಪ್ರಯತ್ನದಿಂದ ಜೀವನದಲ್ಲಿ ಮೇಲೆ ಬನ್ನಿ, ಜೀವನವನ್ನು ಸಾರ್ಥಕಗೊಳಿಸಿಕೊಳ್ಳಿ. ❖

* ಮಾಜಿ ಮುಖ್ಯ ನ್ಯಾಯಾಧೀಶರು ಹಾಗೂ ಮಾಜಿ ರಾಜ್ಯಪಾಲರು, ಬೆಂಗಳೂರು.

# ಚನ್ನಬಸವಣ್ಣನವರು ನಿರೂಪಿಸಿದ ಅಷ್ಟಮಲಗಳು

–ಪ್ರೊ. ಆರ್. ರಾಚಪ್ಪ *

ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು ತಮ್ಮ ವಚನವೊಂದರಲ್ಲಿ 'ಅಷ್ಟಮಲ'ಗಳ ಬಗೆಗೆ ಹೇಳಿದ್ದಾರೆ. ಸಂಸಾರಹೇಯಸ್ಥಲದಲ್ಲಿನ ಆ ವಚನ ಈ ರೀತಿ ಇದೆ–

*ಅಯ್ಯಾ, ನಿಮ್ಮ ನಿಜಾಚರಣೆಯ ನಿಲುಕಡೆಯ*
*ಭವಪಾಶ ಪ್ರಾಣಿಗಳೆತ್ತಬಲ್ಲರಯ್ಯಾ?*
*ಅಯ್ಯಾ, ಕುರಿ ಬಲ್ಲುದೆ ರಸದಾಳಿ ಕಬ್ಬಿನ ಸ್ವಾದವ?*
*ಶುನಿಬಲ್ಲುದೆ ಕಲ್ಪವೃಕ್ಷದ? ದಂಷ್ಟ್ರಿಬಲ್ಲುದೆ ಕಾಮಧೇನುವ?*
*ಗಾರ್ಧಭ ಬಲ್ಲುದೆ ಚಿಂತಾಮಣಿಯ? ನರಿಬಲ್ಲುದೆ*
*ಗಜಭದ್ರವ?*
*ಕಾಗೆ ಬಲ್ಲುದೆ ಪರಮಾಮೃತವ ?*
*ಅಂಧಕ ಬಲ್ಲನೆ ಕನ್ನಡಿಬಿಂಬ ಮೊದಲಾಗಿ ಅನಂತ*
*ಚಿತ್ರ ವಿಚಿತ್ರಂಗಳ?*
*ಬಧಿರಬಲ್ಲನೆ ಪ್ರಣವೋಂನಾದ ಮೊದಲಾದ ದಶನಾದಗಳ*
*ಷಂಡಬಲ್ಲನೆ ರತಿ ಸಂಯೋಗವ?*
*ತೊತ್ತುಬಲ್ಲನೆ ರಾಜಭೋಗವ? ಹೇಡಿಬಲ್ಲನೆ*
*ರಣಧೀರತ್ವವ?*
*ದರಿದ್ರಬಲ್ಲನೆ ನವರತ್ನಂಗಳ?*
*ಬೆಸ್ತ ಬಲ್ಲನೆ ಅಂದಳ ಮೊದಲಾದ ಅಷ್ಟ ಭೋಗಂಗಳ*
*ಮೂಢಬಲ್ಲನೆ ಶಿವಕವಿತ್ವವ? ಕಾಮಿಬಲ್ಲನೆ*
*ಶಿವಯೋಗದ ಸುಖವ?*
*ರೋಗಿಬಲ್ಲನೆ ರಂಭಾರಸವ? ಗೂಗಿಬಲ್ಲನೆ*
*ಚಿತ್ಸೂರ್ಯನ ಬೆಳಗ?*
*ಇಂತೆಂತುದಾಗಿ, ಲೋಕದ ದೃಷ್ಟದಂತೆ*
*ಹೊನ್ನು ಮಣ್ಣು ಹೆಣ್ಣು ಅನ್ನ ನೀರು ವಸ್ತ ಆಭರಣ*
*ವಾಹನವೆಂಬ*
*ಅಷ್ಟಮಲಗಳಲ್ಲಿ ಅಷ್ಟಾಮ ವಿಕಾರದಿಂದ ಮಾಯಾಪಾಶಬದ್ಧ*
*ಮಲದಲ್ಲಿ ಬಿದ್ದು ತೊಳಲುವ ಜೀವಿಗಳೆತ್ತ ಬಲ್ಲರಯ್ಯಾ,*
*ನಿಮ್ಮ ಸರ್ವಾಚಾರ ಸಂಪತ್ತಿನಾಚರಣೆಯ*
*ನಿಜಸುಖದ ರಾಜಾಧಿರಾಜ ಶಿವಯೋಗದ ನಿಲುಕಡೆಯ*
*ಕೂಡಲಚನ್ನಸಂಗಮದೇವಾ?'*

ಈ ವಚನದಲ್ಲಿರುವ ಹೊನ್ನು, ಮಣ್ಣು, ಹೆಣ್ಣು, ಅನ್ನ, ನೀರು, ವಸ್ತ್ರ, ಆಭರಣ, ವಾಹನಗಳನ್ನು ಅಷ್ಟಮಲಗಳೆಂದು ಕರೆದಿದ್ದಾರೆ ಜ್ಞಾನಿ ಬಸವಣ್ಣನವರು. ಚನ್ನಬಸವಣ್ಣನವರ ವಚನಗಳನ್ನು ಸಂಪಾದಿಸಿರುವ ಡಾ|| ಆರ್.ಸಿ. ಹಿರೇಮಠ ಅವರು, ಪಾರಿಭಾಷಿಕ ಪದಕೋಶದಲ್ಲಿ ಈ ಅಷ್ಟಮಲಗಳನು ಅಷ್ಟಮದಗಳು ಎಂಬ ಶೀರ್ಷಿಕೆಯಡಿಯಲ್ಲಿ ಸೇರಿಸಿ 'ಅಷ್ಟಮದ'ಗಳೇ 'ಅಷ್ಟಮಲ'ಗಳೆಂದು ಹೇಳಿದ್ದಾರೆ. ಇದು ಸೂಕ್ತವಲ್ಲವೆಂದು ನನ್ನ ಅನಿಸಿಕೆ.

ಚನ್ನಬಸವಣ್ಣನವರು ತಮ್ಮ ಇನ್ನಿತರ ವಚನಗಳಲ್ಲಿ ಕುಲ, ಬಲ, ಧನ, ರೂಪ, ಯೌವನ, ವಿದ್ಯೆ, ರಾಜ್ಯ, ತಪ ಎಂಬ ಅಷ್ಟಮದಗಳನ್ನು ಹೇಳಿದ್ದಾರೆ. ಅಲ್ಲದೆ ಪೃಥ್ವಿ, ಸಲಿಲ, ಪಾವಕ, ಪವನ, ಅಂಬರ, ರವಿ, ಶಶಿ, ಆತ್ಮ ಇವುಗಳಿಗೆ ಸಂಬಂಧಿಸಿದ ಮದಗಳನ್ನೂ ಹೇಳಿದ್ದಾರೆ. ಹೀಗಿರುವಲ್ಲಿ 'ಅಷ್ಟಮಲ'ಗಳನ್ನು 'ಅಷ್ಟಮದ'ಗಳೆಂದು ನಿರ್ಣಯಿಸುವುದು ಸರಿಯಲ್ಲ. ಅಷ್ಟಮಲಗಳೇ ಬೇರೆ ಎಂದು ಭಾವ ಚನ್ನಬಸವಣ್ಣನವರದ್ದು ಎಂಬಂಶ ಅವರ ವಚನಗಳನ್ನು ಓದಿದಾಗ ತಿಳಿಯುತ್ತದೆ.

ಅಷ್ಟಮದಗಳನ್ನು ಕುರಿತು ವಿವೇಕ ಚಿಂತಾಮಣಿಯಲ್ಲಿ 'ಕುಲ, ಬಲ, ಧನ, ರೂಪ, ಯೌವನ, ವಿದ್ಯಾ, ರಾಜ್ಯ, ತಪದೇಳ್ಗೆಯೆಂಬಷ್ಟಮದದಿಂ ಮದಿರಿ' ಎಂದು ಹೇಳಲಾಗಿದೆ. ಕುಲಮದ ಬಲಮದ, ಧನಮದ, ರೂಪಮದ, ಯೌವನಮದ, ವಿದ್ಯಾಮದ, ರಾಜ್ಯಮದ, ತಪಮದ, ಎಂಬಿವು ಅಷ್ಟಮದಗಳೆಂದಾಯಿತು.

ಜೈನಧರ್ಮದಲ್ಲಿ ಶಂಕೆ, ಘೃಣೆ, ಭಯ, ಲಜ್ಜೆ, ಜಿಗುಪ್ಸೆ ಕುಲ, ಶೀಲ, ಜಾತಿಗಳಿಗೆ ಸಂಬಂಧಿಸಿದ ಭಾವನೆಗಳನ್ನು ಅಷ್ಟಮಲಗಳೆಂದು ಪರಿಗಣಿಸಲಾಗಿದೆ. 'ಶಂಕಾದಷ್ಟಮಲಂಗಳುಂ' ಎಂದು ವಡ್ಡಾರಾಧನೆಯಲ್ಲಿ ಗುರುತಿಸಲಾಗಿದೆ. ಚನ್ನಬಸವಣ್ಣನವರು ತಮ್ಮದೇ ಆದ ರೀತಿಯಲ್ಲಿ ಹೊನ್ನು, ಮಣ್ಣು, ಹೆಣ್ಣು, ಅನ್ನ, ನೀರು, ವಸ್ತ್ರ, ಆಭರಣ, ವಾಹನ ಎಂಬಿವುಗಳನ್ನು ಮಲಗಳೆಂದು ಪರಿಗಣಿಸಿ ಅಷ್ಟಮಲಗಳೆಂದು ಹೆಸರಿಸಿದ್ದಾರೆ.

* ರಜತಗಿರಿ, ನಂ.159, 7ನೇ ಬಿ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–560 040.





ಇವುಗಳನ್ನು 'ಮಲ'ಗಳೆಂದು ಪರಿಗಣಿಸಲು ಕಾರಣಗಳನ್ನು ನನಗೆ ತಿಳಿದಂತೆ ಮಂಡಿಸುತ್ತೇನೆ.

'ಹೊನ್ನು', 'ಮಣ್ಣು' ಬಹಳ ಬೆಲೆಯುಳ್ಳ ವಸ್ತುಗಳು. ಇವುಗಳ ಸಂಪಾದನೆಗೆ ಮನುಷ್ಯ ಮಾಡಬಾರದ ಕೆಲಸ ಮಾಡುತ್ತಾನೆ. ಹೊನ್ನಿನ, ಮಣ್ಣಿನ ಮೇಲಿನ ಆಸೆಗೆ ಒಳಗಾಗಿ ಬಾಂಧವ್ಯವನ್ನು ಮರೆಯುತ್ತಾನೆ. ನೀತಿ ನಿಯಮಗಳನ್ನು ತೊರೆಯುತ್ತಾನೆ. ಧರ್ಮಬಾಹಿರನಾಗುತ್ತಾನೆ. ರೀತಿ ರಿವಾಜುಗಳನ್ನು ಬೇಕಾದರೂ ಕಳೆದುಕೊಳ್ಳುತ್ತಾನೆ. ಕಡೆಗೆ ಮನುಷ್ಯತ್ವವನ್ನೇ ತೊರೆಯುತ್ತಾನೆ. ಮಣ್ಣಿಗಾಗಿ (ಜಮೀನು–ಮನೆ ಇತ್ಯಾದಿ) ಯಾರನ್ನು ಬೇಕಾದರೂ ತೊರೆಯುತ್ತಾನೆ. ಹೊನ್ನಿನ ಗಳಿಕೆಗಾಗಿ ಯಾವ ಮಟ್ಟಕ್ಕಾದರೂ ಇಳಿಯುತ್ತಾನೆ. ಹೀಗಾಗಿ ಹೊನ್ನು–ಮಣ್ಣುಗಳು ಮನುಷ್ಯನ ಮನಸ್ಸಿನ ಸ್ವಾಸ್ಥ್ಯವನ್ನು ನಾಶ ಮಾಡುವ ಮಲಗಳು ಎಂಬುದು ಸ್ಪಷ್ಟ

'ಹೆಣ್ಣು' ಮನುಷ್ಯನಲ್ಲಿನ ಮಾನವತ್ವವನ್ನು ನೀಗಿಸುವ ಸಾಧನ. ಹೆಣ್ಣಿಗಾಗಿ ರಾಜ್ಯಗಳಳಿದುದುಂಟು. ಬಾಂಧವ್ಯ ಕಡಿದು ಬೀಳುವುದುಂಟು. ಅಣ್ಣ ತಮ್ಮಂದಿರು ಕಿತ್ತಾಡಿದ್ದುಂಟು. ಮಹಾಭಕ್ತ ರಾವಣನನ್ನು ಕಾಡಿದ್ದು ಹೆಣ್ಣೆ. ಪುರುಷನಿಗೆ ಒಂದು ಕಟ್ಟುಪಾಡು ಹಾಕುವುದೂ ಹೆಣ್ಣೆ. ಹೆಣ್ಣಿನ ಕಾರಣದಿಂದ ಚಂಡಶಾಸನ ಮಿತ್ರತ್ವವನ್ನು ಮರೆತ. ಹೆಣ್ಣಿನ ರೂಪಕ್ಕೆ ಮರುಳಾಗಿ ರಾವಣ ಪಾರ್ವತಿಯನ್ನೇ ಬೇಡಿದ. 'ಹೆಲೆನ್' ಕಾರಣದಿಂದಾಗಿ ಟ್ರಾಯ್‌ನಗರ ಹಾಳಾಯಿತು. ಹೆಣ್ಣಿನ ಕಾರಣಕ್ಕಾಗಿ ಮನುಷ್ಯ ತನ್ನ ಮಾನವತ್ವವನ್ನೇ ಕಳೆದುಕೊಳ್ಳುತ್ತಾನೆ. ಈ ಕಾರಣಕ್ಕಾಗಿ ವೇದವಾದಿಗಳು 'ಹೆಣ್ಣು ಮಾಯೆ' ಎಂದರು. ಈ ಹೆಣ್ಣಿನ, ಮಣ್ಣಿನ, ಹೊನ್ನಿನ ಬಯಕೆಯಲ್ಲಿ ತೊಳಲುವ ಭ್ರಮೆಗೊಳಗಾಗುವ ಮನುಷ್ಯನ ಮನಸ್ಸಿನ ಆಸೆಯನ್ನು ಖಂಡಿಸಿದರು ವಚನಕಾರರು. ಹೆಣ್ಣು ಎಂತಹ ಪ್ರಭಾವಯುತವಾದುದು ಎಂಬುದನ್ನು ಗುರುತಿಸುವಾಗ

*'ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ಉರವನೇರಿತ್ತು,*
*ತಾ ಮಾಡಿದ ಹೆಣ್ಣು ತನ್ನ ನಾಲಗೆಯನೇರಿತ್ತು'*

ಎಂದು ಗುರುತಿಸಲಾಗಿದೆ. ಹೀಗಾಗಿ ಹೆಣ್ಣು ಮನುಷ್ಯನ ಸ್ತಿಮಿತವನ್ನು ಕಳೆಯುವ ಮಲವೆಂಬುದು ನಿರ್ವಿವಾದವಾದುದು.

'ಅನ್ನ' ಮನುಷ್ಯನನ್ನು ಯಾವ ಮಟ್ಟಕ್ಕಾದರೂ ಇಳಿಸುತ್ತದೆ. ಅನ್ನ ಗಳಿಕೆಗಾಗಿ ಮಾನವ ಆಡದ ಆಟವಿಲ್ಲ. ಮಾಡದ ಕೆಲಸವಿಲ್ಲ. ಕಳ್ಳತನ, ಹಾದರ, ವಂಚನೆ, ಸುಲಿಗೆ, ದರೋಡೆಗಳಲ್ಲಿ ತೊಡಗುವುದು ಈ ಅನ್ನಕ್ಕಾಗಿ. 'ಹಸಿವೆ' ಮನುಷ್ಯನಿಗೆ ಇರುವ ದೊಡ್ಡ ಶಾಪ. ಈ ಹಸಿವೆಯನ್ನು ನೀಗಲು ಅನ್ನ ಅವಶ್ಯಕ. ಅದಕ್ಕಾಗಿ ಉದರ ಪೋಷಣೆಗಾಗಿ ನಾನಾವೇಷ ಹಾಕುತ್ತಾನೆ. ಎಂಜಲನ್ನಕ್ಕೂ ಹಾತೊರೆಯುತ್ತಾನೆ. ತನ್ನ ಆಳುದ್ದ ದೇಹವನ್ನು ಗೇಣಾಗಿಸಿ 'ಭವತಿ ಭಿಕ್ಷಾಂದೇಹಿ' ಎಂದು ಅಂಗಲಾಚುತ್ತಾನೆ. 'ಅನ್ನ' ದೇವರ ಮುಂದೆ ಇನ್ನಾವ ದೇವರೂ ಇಲ್ಲ ಎಂಬ ನಿಲುವನ್ನು ತಳೆಯುತ್ತಾನೆ. ಆದುದರಿಂದ ಅನ್ನಗಳಿಕೆ ಮನುಷ್ಯನನ್ನು ಕಾಡುವ ಮಲವೇ ಸರಿ.

'ನೀರು' ಮನುಷ್ಯನ ಅಸ್ತಿತ್ವಕ್ಕೆ ಅತ್ಯವಶ್ಯಕ ವಸ್ತು. ನೀರಿಲ್ಲದೆ ಪ್ರಾಣವಿಲ್ಲ. ಕೆಲವೊಮ್ಮೆ ನೀರು ಜೀವನಾಧಾರವಾಗುವುದೂ ಉಂಟು. ಅದಕ್ಕೆಂದೇ ಕಾಣುತ್ತದೆ ಸಂಸ್ಕೃತದಲ್ಲಿ ನೀರನ್ನು 'ಜೀವನ' ಎಂದು ಕರೆದಿರುವುದು. ನೀರಿಗಾಗಿ ಮನುಷ್ಯ ಪಡುವ ಪಾಡು ಅಪಾರ. ಊರ ಹೊರಗೆ, ಊರ ಒಳಗೆ, ನೀರಿಗಾಗಿ ಬವಣೆ ಪಡುವುದು ಸರ್ವೇ ಸಾಮಾನ್ಯ. ಬಾವಿಗಳನ್ನು ತೋಡುವುದು ನೀರು ಬಾರದಿದ್ದರೆ ಕೊಳಗೆ ಬಾವಿಗಳನು ಹಾಕಿಸುವುದು, ನಲ್ಲಿ ನೀರಿಗಾಗಿ ಕಾದು ಕಾತರಿಸುವುದು, ಬೀದಿನಲ್ಲಿಯ ಬಳಿ ಜಗಳವಾಡುವುದು ನಗರವಾಸಿಗಳಿಗೆ ದಿನನಿತ್ಯದ ಕೆಲಸವಾಗಿದೆ. ಗದ್ದೆಗಳಿಗೆ ನೀರು ಹಾಯಿಸುವಲ್ಲಿ ಹೊಡೆದಾಡಿ, ಕಡಿದಾಡಿ, ಆಸ್ತಿ ಕಳೆದುಕೊಂಡ ಉದಾಹರಣೆಗಳು ಏಷ್ಟೋ. ಹೀಗಿರುವಲ್ಲಿ 'ನೀರು' ಮನುಷ್ಯನನ್ನು ಕಾಡುವ 'ಮಲ' ಹೌದಲ್ಲವೆ?

'ವಸ್ತ' 'ಆಭರಣ'ಗಳು ಮನುಷ್ಯನನ್ನು ಕಾಡುವ ಮಹತ್ತರ ವಸ್ತುಗಳು. ಸಾಮಾಜಿಕವಾಗಿ ತಾನು ಗಣ್ಯನೆನಿಸಿಕೊಳ್ಳುವ ಸಲುವಾಗಿ ಸಾಲಮಾಡಿಯಾದರೂ ವಸ್ತ್ರ, ಆಭರಣಗಳನ್ನು ಹೊಂದಲು ಹವಣಿಸುತ್ತಾನೆ. ಒಳ್ಳೆ ಬಟ್ಟೆ ತೊಡದಿದ್ದರೆ ಇತರರು ತನ್ನನ್ನು ಗಮನಿಸುವುದಿಲ್ಲ. ತಾನು ಧರಿಸುವ ಉಡುಪು ತನ್ನ ಯೋಗ್ಯತೆಯನ್ನು ತಿಳಿಸುತ್ತದೆ ಎಂಬ ಮೌಢ್ಯ ಮಾನವನನ್ನು ಕಾಡುತ್ತದೆ, ತುಂಡು ಪಂಚೆ ತುಂಡು ಶಲ್ಯ ಹೊದ್ದಿದ್ದ ಗಾಂಧಿಯನ್ನು ಇಡೀ ಪ್ರಪಂಚ ಗೌರವಿಸಿತು ಏಕೆ? ಎಂಬುದನ್ನು ನಾವು ಪರಿಗಣಿಸುವುದಿಲ್ಲ. ಏಕೆಂದರೆ ವಸ್ತ್ರ ಆಭರಣಗಳ ಮೇಲಿನ ಮೋಹ ನಮ್ಮನ್ನು ಕಾಡುತ್ತದೆ. ಮೈಮೇಲೆ ಚಿನ್ನ ಇಲ್ಲದಿದ್ದರೆ

ನಾವು ಮನುಷ್ಯರೇ ಅಲ್ಲ ಎಂಬ ಭಾವನೆ ನಮ್ಮಲ್ಲಿ ತುಂಬಿದೆ. ನಮ್ಮ ಯೋಗ್ಯತೆಯನ್ನು ಗುರುತಿಸುವುದು ನಾವು ಧರಿಸುವ ಆಭರಣಗಳ ಆಧಾರದ ಮೇಲೆ ಎಂಬ ಸಾಮಾಜಿಕ ಅಳತೆ ಗೋಲಿನ ಭಯದಿಂದಾಗಿ ವಸ್ತ್ರ ಆಭರಣಗಳ ವ್ಯಾಮೋಹದಲ್ಲಿ ಕಟ್ಟುಬಿದ್ದು ಮಾಡಬಾರದ ಕ್ರಿಯೆಗಳಲ್ಲಿ ತೊಡಗುತ್ತಾನೆ. ದುಃಖ ಭಾಜನನಾಗುತ್ತಾನೆ. ಮೂರ್ಖನಾಗುತ್ತಾನೆ, ಮನುಷ್ಯತ್ವವನ್ನೇ ಕಳೆದುಕೊಳ್ಳುತ್ತಾನೆ. ಇದರಿಂದಾಗಿ ವಸ್ತ್ರಾಭರಣಗಳು ಮನುಷ್ಯನನ್ನು ಕಾಡುವ 'ಮಲ'ಗಳೇ ಆಗಿವೆ.

'ವಾಹನ' 'ಮದ'ವೂ ಹೌದು. ಮನುಷ್ಯನಲ್ಲಿ ಸೋಮಾರಿತನ ಹೆಚ್ಚಿದಂತೆ ತನ್ನ ಪ್ರಯಾಣ ಸೌಕರ್ಯಗಳನ್ನು ಹೆಚ್ಚಿಸಿಕೊಳ್ಳ ತೊಡಗಿದ. ನಡೆಯುವವನು–ಎತ್ತಿನ ಬಂಡಿ ಕಂಡುಕೊಂಡ. ಆದಾದ ಮೇಲೆ ಕುದುರೆ–ಆನೆ–ಒಂಟೆಗಳನ್ನು ಹೆಚ್ಚಿಸಿಕೊಳ್ಳ ರೂಢಿಸಿಕೊಂಡ. ಯಂತ್ರಚಾಲಿತ ಬಂಡಿಯನ್ನು ಉಪಯೋಗಿಸಿದ. ಅದು ನಿಧಾನವೆಂದು ವಿಮಾನದಲ್ಲಿ ಹಾರಾಡಿದ. ಅದೂ ನಿಧಾನವೆಂದು ರಾಕೆಟ್ಟುಗಳನ್ನು ಕಂಡುಹಿಡಿದ. ಹೀಗೆ ತನ್ನ ಸೌಲಭ್ಯಕ್ಕಾಗಿ ವಾಹನಗಳ ಮೇಲಿನ ಮೋಹವನ್ನು ಹೆಚ್ಚಿಸಿಕೊಂಡ. ಹೀಗೆ ವಾಹನ 'ಮಲ'ವಾಗಿ ಕಾಡಿತ್ತು ಮನುಷ್ಯನನ್ನು, ಅಲ್ಲದೆ ತಾನು ಇತರರಿಗಿಂತ ಉತ್ತಮನೆಂದು ತೋರಿಸಿಕೊಳ್ಳುವ ಅಭಿಲಾಷೆಗೆ ಒಳಗಾಗಿ ಮನುಷ್ಯ ಎತ್ತಿನ ಬಂಡಿಯಲ್ಲಿ ಹೋಗುವಾಗ ನಡೆಯುವವನನ್ನು ಕಂಡು ನಗಲಾರಂಭಿಸಿದ. ಕುದುರೆ ಆನೆಯನ್ನು ಏರಿ ಹೋಗುವವನು ತಾನು ಉತ್ತಮ–ಧನಿಕ ಎಂಬ ಭಾವವನ್ನು ತಳೆದ. ಯಂತ್ರಚಾಲಿತ ವಾಹನಗಳಲ್ಲಿ ಹೋಗುವ ವ್ಯಕ್ತಿ ತಾನು ಎಲ್ಲರಿಗಿಂತಲೂ ಅಧಿಕನೆಂಬ ಬಿಗುಮಾನ–ಬಿಂಕದಿಂದ ಮೆರೆದ. ಹೀಗಾಗಿ 'ವಾಹನ ಮದ' ಮನುಷ್ಯನನ್ನು ಮಲವಾಗಿ ಕಾಡುತ್ತಿರುವುದುಂಟು.

ಈ ಹಿನ್ನಲೆಯಲ್ಲಿ ಚೆನ್ನಬಸವಣ್ಣನವರು ಹೇಳಿರುವ ಹೊನ್ನು, ಮಣ್ಣು, ಹೆಣ್ಣು, ಅನ್ನ, ನೀರು, ವಸ್ತ್ರ ಆಭರಣ ವಾಹನಗಳು ಮನುಷ್ಯನನ್ನು ಕಾಡುವ ಮಲಗಳೇ ಸರಿ. ❖

> ತಾತ್ಕಾಲಿಕ ಬಾಹ್ಯ ಯಶಸ್ಸಾಗಲೀ, ಸನ್ನಿಹಿತ ಭಾವೀ ಯಶಸ್ಸಾಗಲೀ ಈ ಜೀವನದ ಉದ್ದೇಶವಲ್ಲ, ಆತ್ಮದ ವಿಕಾಸವೇ ಜೀವನದ ಉದ್ದೇಶ.
>
> –ಶ್ರೀ ಅರವಿಂದರು.

## ಕಾಯ ಗುರು, ಪ್ರಾಣಲಿಂಗ, ಜ್ಞಾನಜಂಗಮ

**ಕಾಯ ಗುರು, ಪ್ರಾಣಲಿಂಗ, ಜ್ಞಾನ ಜಂಗಮ**
**ಕಾಯದಲ್ಲಿ ಶುದ್ಧ ಪ್ರಸಾದ, ಪ್ರಾಣದಲ್ಲಿ ಸಿದ್ಧಪ್ರಸಾದ**
**ಜ್ಞಾನದಲ್ಲಿ ಪ್ರಸಿದ್ಧ ಪ್ರಸಾದ.**
**ಈ ತ್ರಿವಿಧ ಪ್ರಸಾದ ನಿರ್ಣಯ ಕೂಡಲ ಚೆನ್ನಸಂಗಾ**
**ನಿಮ್ಮ ಶರಣಂಗೆ**

**–ಚೆನ್ನಬಸವಣ್ಣನವರು**

ಗುರುವು ಶಿಷ್ಯನ ಕಾಯಕ್ಕೆ, ಆಜ್ಞಾದೀಕ್ಷೆ ವಿಭೂತಿಯ ಪಟ್ಟ, ಲಿಂಗಾಯತ, ಲಿಂಗಸ್ವಾಯತ ಇತ್ಯಾದಿ ಏಳನ್ನು ಉಪದೇಶ ಮಾಡುತ್ತಾನೆ. ಅದೇ ರೀತಿ ಪ್ರಾಣಕ್ಕೆ ಸಹ ಸಮಯ, ನಿರ್ವಾಣ, ಆಧ್ಯಾತ್ಮ ಇತ್ಯಾದಿ ಏಳನ್ನು ಉಪದೇಶ ಮಾಡುತ್ತಾನೆ. ಕಾಯಕವೇ ಕೈಲಾಸ, ದೇಹವೇ ದೇವಾಲಯವೆಂದು ಶರಣರು ಕರೆದಿದ್ದಾರೆ. ಪರಮಾತ್ಮನೇ ಗುರು ಸ್ವರೂಪನೆಂದು ಭಾವಿಸಿರುವರು. ಗುರುವು ಮಾಂಸ ಪಿಂಡವನ್ನು ಮಂತ್ರಪಿಂಡವನ್ನಾಗಿ ಮಾಡಿ, ಕರಕಮಲದಲ್ಲಿ ಜ್ಯೋತಿರ್ಮಯವಾದ ತತ್ವಜ್ಞಾನವನ್ನು ಆ ಕುರುಹಿನಲ್ಲಿ ಬಚ್ಚಿಟ್ಟು ಇಷ್ಟಲಿಂಗವನ್ನಾಗಿ ಮಾಡಿ ಭಕ್ತನ ಕೈಯಲ್ಲಿ ಕೊಟ್ಟು, ಸರ್ವ ಇಂದ್ರಿಯಗಳ ಅವಗುಣಗಳ ನಾಶಮಾಡಿ ಹೃದಯ ಕಮಲದಲ್ಲಿ ನೆಲೆಸಿದ ಜಂಗಮಮೂರ್ತಿಯಾಗಿ ಬಂದು ದೀಕ್ಷಾ, ಗುರು, ಮೋಕ್ಷಾ ಗುರುವಾಗಿ, ಶುದ್ಧ, ಸಿದ್ಧ, ಪ್ರಸಿದ್ಧವನ್ನು ಕಾಣಿಸಿ ಶಿಷ್ಯನ ಭವನ್ನು ದೂರ ಮಾಡುತ್ತಾನೆ. ಅಂಗಕ್ಕೆ ಲಿಂಗವನ್ನು ಕೊಟ್ಟವನು ದೀಕ್ಷಾ ಗುರು ಮನಕ್ಕೆ ಅರಿವನ್ನು ತೋರಿದಾತ ಮೋಕ್ಷಗುರು, ಕಾಯದ ಕರ್ಮವ ಕೆಡಿಸಿ, ಜೀವನ ಭವವ ಭೇದಿಸಿ ತದ್ರೂಪ ತೋರಿದವನು ಜ್ಞಾನ ಗುರು. ಶ್ರೀಗುರು ಕರುಣಿಸಲು ಮಾಯೆ, ಮರವು, ಪ್ರಪಂಚ, ಆವರಿಸಿದ್ದ ಮಾಯಾಪಾಶ ಇವೆಲ್ಲವು ಬಿಟ್ಟುಹೋದವು.

ಗುರುವೆ ಸದಾಶಿವ, ಗುರುವೆ ಮಹಾಮಹಿಮ, ಗುರುವೆ ಅಕಲ್ಪಿತ ನಿತ್ಯ ನಿರವಯ, ಸಾಕಾರವಿಡಿದು ಗುರುಲಿಂಗವಾದು ನಿರಾಕಾರವಿಡಿದು ಪ್ರಾಣಲಿಂಗವಾದ, ಉಭಯಸ್ಥಲ ಏಕವಾದಲ್ಲಿ ಭವರ ಹಿತಭಕ್ತ ಜೀವನ್ಮುಕ್ತನಾದ, ದೇಹ, ಅರ್ಥ, ಪ್ರಾಣ ಅಭಿಮಾನಕ್ಕೆ ಶ್ರೀಗುರು ಕರ್ತನಾಗಿ, ಭೃತ್ಯನಾಗಿ ಒಂದು ನಿಮಿಷ ತ್ರಿಕರಣ ಶುದ್ಧನಾಗಿ ಗುರುಸೇವೆಯ ಮಾಡುವ ಶಿಷ್ಯನಿಗೆ ಗುರುವುಂಟು, ಗುರುವುಂಟಾಗಿ ಲಿಂಗವುಂಟು. ಲಿಂಗವುಂಟಾಗಿ ಜಂಗಮವುಂಟು. ಜಂಗಮವುಂಟಾಗಿ ಪ್ರಸಾದವುಂಟು ಹೀಗೆ ಗುರು, ಚರ, ಲಿಂಗ, ಪ್ರಸಾದ ಒಂದೇಯಾಗಿ ಸೇವಿಸಬಲ್ಲನಾಗಿ ನಿತ್ಯಮುಕ್ತಿ ಯೆಂದು ಆದಯ್ಯ ಶರಣರು ಹೇಳಿದ್ದಾರೆ. ಉಪದೇಶವ ಮಾಡಿದಲ್ಲಿ ಗುರುವಾದ ಕಾಮಿತ ಫಲಂಗಳ ಕೊಟ್ಟಲ್ಲಿ ಲಿಂಗವಾದ, ನಿತ್ಯ ನಿರ್ವಾಣದ ಸಕೀಲವ ತೋರಿಸಿದಲ್ಲಿ ಜಂಗಮನದು, ಶುದ್ಧ ಪ್ರಸಾದ ಗುರುವಿನದು, ಸಿದ್ಧಪ್ರಸಾದ ಲಿಂಗದದು, ಪ್ರಸಿದ್ಧ ಪ್ರಸಾದ ಜಂಗಮನದು.





# ಅಂಬಲಿಯ ನೇಮದ ಮಾದಾರ ಚೆನ್ನಯ್ಯ

–ಪ್ರೊ. ಎಂ. ಪ್ರಸನ್ನಕುಮಾರ್*

*ಹಾಲನೇಮ, ಹಾಲ ಕೆನೆಯ ನೇಮ,*
*ಕೆನೆ ತಪ್ಪಿದ ಬಳಿಕ ಕಿಚ್ಚಡಿಯ ನೇಮ,*
*ಬೆಣ್ಣೆಯ ನೇಮ, ಬೆಲ್ಲದ ನೇಮ,*
*ಅಂಬಲಿಯ ನೇಮದವರಾನರನೂ ಕಾಣೆ,*
*ಕೂಡಲಸಂಗನ ಶರಣರಲ್ಲಿ*
*ಅಂಬಲಿಯ ನೇಮದಾತ ಮಾದಾರ ಚೆನ್ನಯ್ಯ*

ಈ ರೀತಿ ಬಸವಣ್ಣನವರ ಪ್ರಶಂಸೆಗೆ ಪಾತ್ರನಾದ ಮಾದಾರ ಚೆನ್ನಯ್ಯ ಅನನ್ಯ ಶಿವಭಕ್ತ. ಅಸ್ಪೃಶ್ಯಜಾತಿಗೆ ಸೇರಿದವನಾತ ಈತ ತಮಿಳುನಾಡಿನ ಕಾಂಚಿ ನಗರದ ರಾಜ ಕರಿಕಾಲ ಚೋಳನ ಕುದುರೆಯ ಲಾಯದಲ್ಲಿ ಹುಲ್ಲು ಹೊರುವ ಸೇವಕನಾಗಿದ್ದ. ಚೆನ್ನಯ್ಯ ಗುಪ್ತ ಭಕ್ತ. ಈತ ಜೇಡರ ದಾಸಿಮಯ್ಯನಿಗಿಂತ ಪುರಾತನ. ಈತ ತಮಿಳುನಾಡಿನಲ್ಲಿಯೇ ಇದ್ದು ಕನ್ನಡದಲ್ಲಿ ವಚನಗಳನ್ನು ರಚಿಸಿರುವುದು ಆಶ್ಚರ್ಯ ತರುತ್ತದೆ. ಈತ ಕರ್ನಾಟಕಕ್ಕೆ ಬಂದಂತೆ ತೋರುವುದಿಲ್ಲ. ಕುಲಜರು ಕುಲಹೀನರು ಎಂಬ ಪ್ರಶ್ನೆ ಇಡೀ ಭಾರತದ್ದು. ಈ ವ್ಯವಸ್ಥೆಯ ಬಗ್ಗೆ ಚೆನ್ನಯ್ಯನಿಗೂ ರೋಷವಿರುವುದು ಅವನ ವಚನಗಳಲ್ಲಿ ಕಂಡು ಬರುತ್ತದೆ.

ಈತ ಪೂಜೆ ಮಾಡುತ್ತಿದ್ದುದು ಗುಡಿಯ ಲಿಂಗವಲ್ಲ. ಮರಳಿನಲ್ಲಿ ನಿತ್ಯ ಹೊಚ್ಚ ಹೊಸ ಲಿಂಗವನ್ನು ಮಾಡಿ ಪೂಜಿಸುತ್ತಿದ್ದ. ಅಂದೇ ಅದರ ವಿಸರ್ಜನೆಯಾಗುತ್ತಿತ್ತು. ಚೆನ್ನಯ್ಯ ಶಿವನಿಗೆ ಅರ್ಪಿಸುತ್ತಿದ್ದ ಅಂಬಲಿ ಬಹಳ ಪ್ರಸಿದ್ಧವಾಗಿದೆ. ಇದರ ಹಿನ್ನಲೆಯಲ್ಲಿ ಒಂದು ಕಥೆ ಇದೆ.

ಶಿವನು ಚೆನ್ನಯ್ಯನ ಅಂಬಲಿಯ ಘನತೆಯನ್ನು ಜಗತ್ತಿಗೆ ಸಾರಲು ನಿರ್ಧರಿಸುತ್ತಾನೆ. ರಾಜನಾದ ಕರಿಕಾಲ ಚೋಳನು ಶಿವನ ಮಹಾಭಕ್ತ. ಆದರೆ ಒಂದು ದಿನ ಶಿವನು ಬೇಕೆಂತಲೆ ಕರಿಕಾಲ ಚೋಳನು ಅರ್ಪಿಸಿದ ಮೃಷ್ಟಾನ್ನ ಭೋಜನ ಸ್ವೀಕರಿಸಲಿಲ್ಲ. ಆಗ ಚೋಳರಾಜನು ಪ್ರಾಣಾರ್ಪಣೆ ಮಾಡಲು ಸಿದ್ಧನಾದಗ ಶಿವನು ಪ್ರತ್ಯಕ್ಷನಾಗಿ 'ನಮಗಿಂದು ಹಸಿವಿಲ್ಲ, ಉಂಡದ್ದೇ ಆದರೆ ಚೆನ್ನಯ್ಯನ ಅಂಬಲಿಯೇ' ಎನ್ನುತ್ತಾನೆ.

ಚೆನ್ನಯ್ಯನ ಹೆಸರನ್ನೇ ಕೇಳದ ರಾಜ, ವಿಚಾರಿಸಿದಾಗ, ಆತ ಮತ್ಯಾರು ಅಲ್ಲದೆ, ತನ್ನ ಅರಮನೆಯ ಕುದುರೆಯ ಲಾಯದ ಆಳು ಎಂದು ತಿಳಿದು ಬರುತ್ತದೆ. ರಾಜನು ಆತನನ್ನು ಮೆರವಣಿಗೆಯಲ್ಲಿ ಶಿವ ದೇವಾಲಯದೊಳಕ್ಕೆ ಕರೆ ತರುತ್ತಾನೆ. ಈ ಕೀರ್ತಿ ಕರ್ನಾಟಕಕ್ಕೂ ತಿಳಿದು ಬರುತ್ತದೆ. ಬಸವಣ್ಣನವರು ಮಾದಾರ ಚೆನ್ನಯ್ಯನನ್ನು ಸ್ಮರಿಸಿಕೊಂಡಷ್ಟು ಬೇರೆ ಯಾರನ್ನು ಸ್ಮರಿಸಿಕೊಂಡಿಲ್ಲ.

ಬಸವನಂತಹ ಪ್ರಾಜ್ಞ, ಪ್ರವಾದಿಯಿಂದ ಮೆಚ್ಚುಗೆ ಪಡೆದ ಮಾದಾರ ಚೆನ್ನಯ್ಯ ಅಪರೂಪದ ಭಕ್ತ, ಬಸವಣ್ಣನವರು ಅವನನ್ನು ಹಲವಾರು ವಚನಗಳಲ್ಲಿ ಸ್ತುತಿಸಿದ್ದಾರೆ. ಅವನ ಆದರ್ಶವನ್ನು ಹಾಡಿ ಹೊಗಳಿದ್ದಾರೆ

*'ಅಪ್ಪನು ನಮ್ಮ ಮಾದಾರ ಚೆನ್ನಯ್ಯ'*
*'ಗೋತ್ರ ನಾಮವ ಬೆಸೆಗೊಂಡೊಡೆ*
*ಮಾತು ನೂಕದೆ ಸುಮ್ಮನಿದ್ದಿರಿದೇನಯ್ಯಾ*
*ಗೋತ್ರ ನಾಮ ಮಾದಾರಚೆನ್ನಯ್ಯ'*

ಎಂದೆಲ್ಲಾ ಬಸವಣ್ಣನವರಿಂದ ಹಾಡಿ ಹೊಗಳಿಸಿಕೊಂಡ ಮಾದಾರಚೆನ್ನಯ್ಯನ ಹತ್ತು ವಚನಗಳು ಮಾತ್ರ ಸಿಕ್ಕಿವೆ. 'ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ ಅರಿ ನಿಜಾತ್ಮ ರಾಮ ರಾಮನಾ' ಎಂಬ ಅಂಕಿತದಲ್ಲಿ ರಚಿತವಾಗಿರುವ ಈತನ ವಚನಗಳಲ್ಲಿ ಕುಲವೃತ್ತಿಯನ್ನು ಬಳಸಿ, ಕುಲಜಾತಿ ಚರ್ಚೆಯನ್ನು ಕೇಂದ್ರಬಿಂದುವಾಗಿಸಿದ್ದಾನೆ.

ಅವನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಹ ಎರಡು ವಚನಗಳು ಹೀಗಿವೆ:

*ನಡೆನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆ ಸೂತಕವಿಲ್ಲ*
*ನುಡಿ ಲೇಸು, ನಡೆಯಧಮವಾದಲ್ಲಿ*
*ನುಡಿ ಬಿಡುಗಡೆಯಿಲ್ಲದ ಹೊಲೆ*

* ನಂ. ೧೦೨, ೪ನೇ ಮುಖ್ಯರಸ್ತೆ, ನಾಗರಭಾವಿ ೨ನೆಯ ಹಂತ, ಬೆಂಗಳೂರು–೫೬೦ ೦೭೨.

ಕಳವು ಪಾರದಾರಂಗಳಲ್ಲಿ ಹೊಲಬನರಿಯದೆ,
ಕೆಟ್ಟು ನಡೆವುತ್ತ, ಮತ್ತೆ ಕುಲಜರೆಂಬ ಒಡಲವರುಂಟೆ?
ಆಚಾರವೆ ಕುಲ, ಅನಾಚಾರವೆ ಹೊಲೆ,
ಇಂತೀ ಉಭಯವ ತಿಳಿದರಿಯಬೇಕು,
ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ,
ಅರಿ ನಿಜಾತ್ಮಾ ರಾಮ ರಾಮನಾ

ಕುಲದ ಸೂತಕ ಹೊಲೆತನದ ಸೂತಕ ಬರುವುದು ಹುಟ್ಟಿನಿಂದಲ್ಲ. ನಡೆ-ನುಡಿ ಕೇವಲ ಅಳವಡಿಕೆಯಾಗುವುದು ಮುಖ್ಯವಲ್ಲ ಅವು ಸಿದ್ಧಾಂತವಾಗಬೇಕು, ಎನ್ನುವ ಚೆನ್ನಯ್ಯನ ಮಾತು ಬಹು ಬೆಲೆಬಾಳುವಂತಹುದು. ಸಿದ್ಧಾಂತ ಎನ್ನುವ ಪದಕ್ಕೆ ನಿರ್ಣಯ, ನಿರ್ಧಾರ, ಸ್ಥಾಪಿತವಾದ ತತ್ವ ಮುಂತಾದ ಘನತರವಾದ ಅರ್ಥಗಳಿವೆ. ಮೊದಲ ಸಾಲಿನಲ್ಲಿಯೇ ಚೆನ್ನಯ್ಯ ಹೇಳುವುದು. 'ನಡೆ ನುಡಿ ನುಡಿಸಿದ್ಧಾಂತವಾಗಬೇಕು' ಆದರೆ ಇಂದಿನ ಪರಿಸ್ಥಿತಿ ಏನಾಗಿದೆ? ನುಡಿ ಲೇಸಾಗಿದೆ ನಡೆ ಅಧಮವಾಗಿದೆ, ಇವೆ ಹೊಲೆತನ ಇವುಗಳಿಂದ ಬಿಡುಗಡೆಯಾದಾಗ ಮಾತ್ರ ಹೊಲತನವಿಲ್ಲ. ಕಳವು ಹಾದರಗಳಲ್ಲಿ ಮುಳುಗಿ, ಹೊರಬರುವ ದಾರಿಯ ಕಡೆಗೆ ತಿರುಗಿಯೂ ನೋಡದೆ, ಕೆಟ್ಟು ಕೊಳೆತಿರುವುದನ್ನು ಹೇಗೆ ಕುಲಜರೆನ್ನಬೇಕು. ಮುಂದಿನ ಸಾಲಿನಲ್ಲಿ ಮತ್ತಷ್ಟು ಸುಲಭವಾಗಿ ಚೆನ್ನಯ್ಯ ವಿವರಿಸಿದ್ದಾನೆ. 'ಆಚಾರವೇ ಕುಲ ಅನಾಚಾರವೇ ಹೊಲೆ, ಇಂತೀ ಉಭಯವ ತಿಳಿದಿರಬೇಕು' ಎನ್ನುವಲ್ಲಿ ಶರಣರು ಆಚಾರಕ್ಕೆ ಕೊಟ್ಟ ಮಹತ್ವದ ಅರಿವಾಗುತ್ತದೆ.

ಆತನ ಇನ್ನೊಂದು ಪ್ರಮುಖವಾದ ವಚನ,
ವೇದಶಾಸ್ತ್ರಕ್ಕೆ ಹಾರುವನಾಗಿ,
ವೀರ ವಿತರಣಕ್ಕೆ ಕ್ಷತ್ರಿಯನಾಗಿ,
ವೈಶ್ಯನಾಗಿ ವ್ಯಾಪಾರದೊಳಗಾಗಿ
ಕೃಷಿಯ ಮಾಡುವುದಕ್ಕೆ ಶೂದ್ರನಾಗಿ
ಇಂತೀ ಜಾತಿಗೋತ್ರದೊಳಗಾದ ನೀಚ ಶ್ರೇಷ್ಠವೆಂಬ
ಸರ್ವನಾಸ್ತಿಯ ನೋಡುವಲ್ಲಿ
ಎರಡು ಕುಲವಲ್ಲದೆ,
ಹೊಲೆ ಹದಿನೆಂಟು ಜಾತಿಯೆಂಬ ಕುಲವಿಲ್ಲ.
ಬ್ರಹ್ಮವನರಿದಲ್ಲಿ ಬ್ರಾಹ್ಮಣ
ಸರ್ವಜೀವತ್ರ ಕರ್ಮಕ್ಕೊಳಗಾಗಿದ್ದಲ್ಲಿ ಸಮಗಾರ
ಈ ಉಭಯವನರಿದು ಮರೆಯಲಿಲ್ಲ
ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ,
ಅರಿ ನಿಜಾತ್ಮಾ ರಾಮ ರಾಮನಾ.

ಇದರಲ್ಲಿ ಜಾತಿಗಳ ಆಚರಣೆಯ ವೈಜ್ಞಾನಿಕ ವಿಶ್ಲೇಷಣೆಯೇ ನಡೆದಿರುವುದನ್ನು ಕಾಣಬಹುದು.

ವೇದಶಾಸ್ತ್ರಕ್ಕೆ ತನ್ನನ್ನು ಮುಡುಪಾಗಿಟ್ಟು ಕೊಂಡವನು ಹಾರುವ, ವೀರಶೌರ್ಯಕ್ಕೆ ಮುಡುಪಾಗಿಟ್ಟುಕೊಂಡವನು ಕ್ಷತ್ರಿಯ, ವ್ಯಾಪಾರ ವ್ಯವಹಾರಕ್ಕೆ ಮುಡುಪಾಗಿಟ್ಟುಕೊಂಡ ವನು ವೈಶ್ಯ, ಕೃಷಿ ವ್ಯವಹಾರಕ್ಕೆ ಮುಡುಪಾಗಿಟ್ಟುಕೊಂಡವನು ಶೂದ್ರ

ಈ ಲೋಕದ ವ್ಯವಹಾರವನ್ನು ಮಾಡುವಲ್ಲಿ ಕಾಯಕ ದೃಷ್ಟಿಯಿಂದ ಜಾತಿಗಳಾದವಲ್ಲದೆ, ಅವುಗಳಲ್ಲಿ ನೀಚ ಶ್ರೇಷ್ಠ ಎಲ್ಲುಂಟು? ಎಂದು ಪ್ರಶ್ನಿಸುವ ಮಾದಾರ ಚೆನ್ನಯ್ಯ ಇರುವುದು, ಎರಡೇ ಕುಲ ನೀಚ, ಶ್ರೇಷ್ಠ, ಬ್ರಹ್ಮವನ್ನು ಅರಿತವ ಬ್ರಾಹ್ಮಣ, ಜೀವ ಹತ್ಯಪ್ರಾಣಿಗಳ ಕರ್ಮದಲ್ಲಿ ತೊಡಗಿದವನೇ ಸಮಗಾರ-ಚರ್ಮಗಾರ.

ವ್ಯವಸ್ಥಿತ ಆರೋಗ್ಯಕರ ಸಮಾಜಕ್ಕೆ ಮನದ ಕೊಳೆಯನ್ನು ತೊಳೆಯಲು ಬ್ರಹ್ಮಜ್ಞಾನವು ಬೇಕು, ಬ್ರಾಹ್ಮಣನು ಬೇಕು, ಪರಿಸರದ ಕೊಳೆಯನ್ನು ತೊಳೆದು ಸತ್ತ ಪ್ರಾಣಿಗಳನ್ನು ಸಂಸ್ಕರಿಸಿ ಉಪಯೋಗಕ್ಕೆ ಬೇಕಾದ ಚರ್ಮವನ್ನು ಸಿದ್ಧಪಡಿಸುವ ಸಮಗಾರನೂ ಬೇಕಲ್ಲವೆ? ಇಂತಿರುವಾಗ ಮೇಲು ಕೀಳು ಜಾತಿಗಳೆಂಬ ವಾದ ಎಲ್ಲಿಯದು? ಎಂದು ಯಾವುದೆ ರಾಗ ದ್ವೇಷಗಳ, ಸೋಂಕಿಲ್ಲದೆ ನಮ್ರ ಮನಸ್ಸಿನಿಂದ, ದಿಟ್ಟ ನಿಲುವಿನಿಂದ ಪ್ರಶ್ನಿಸುತ್ತಾನೆ ಮಾದಾರ ಚೆನ್ನಯ್ಯ.

❖

ಶುಕ್ಲ, ಶೋಣಿತ, ಮಜ್ಜೆ, ಮಾಂಸ, ಹಸಿವು, ತೃಷೆ
ವಿಷಯವ್ಯಸನಾದಿಗಳಲ್ಲ ಒಂದೇ ಭೇದ
ಮಾಡುವ ಕೃಷಿ ವ್ಯವಸಾಯ ಹಲವಲ್ಲದೆ
ತೋರುವ ತೋರಿಕೆ ಅರಿವ ಆತ್ಮನೊಂದೇ
ಭೇದ. ಆವಕುಲವಾದಡೂ ಅರಿದಲ್ಲಿಯೇ
ಪರತತ್ವ ಭಾವಿ ಮರೆದಲ್ಲಿಯೇ ಮಲ ಮಾಯಾ
ಸಂಬಂಧಿ ಇಂತೀ ಉಭಯವನರಿದು ಮರೆಯ
ಲಿಲ್ಲ ಕೈಯುಳಿಗತ್ತಿ ಅಡಿಗೂಂಟಕ್ಕೆಡೆಯಾಗ
ಬೇಡ ಅರಿನಿಜಾತ್ಮ ರಾಮರಾಮನ !

-ಮಾದಾರ ಚೆನ್ನಯ್ಯ







# ಲೋಕಪ್ರಜ್ಞೆಯ ಕರ್ಮಯೋಗಿ ದೇಶಹಳ್ಳಿ ಜಿ. ನಾರಾಯಣ

-ಗೊ.ರು. ಚನ್ನಬಸಪ್ಪ*

*'ಅವರನ್ನು ಪೂರ್ಣ ನಂಬಬೇಡ; ಏಕೆಂದರೆ ಅವರು ಶೇಕಡ ೫೦ರಷ್ಟು ಮಾತ್ರ ಒಳ್ಳೆಯವರು. ಇವರನ್ನು ಪೂರ್ತಿ ನಿಂದಿಸಬೇಡ; ಏಕೆಂದರೆ ಶೇಕಡ ೫೦ರಷ್ಟ್ ಮಾತ್ರ ಕೆಟ್ಟವರು'*
*-ಸದ್ಗುರು ಓಂಕಾರ್*

ಇಬ್ಬರೂ ಪೂರ್ಣ ಒಳ್ಳೆಯವರಲ್ಲ. ಪ್ರತ್ಯೇಕವಾಗಿ ಇವರಿಂದ ಪೂರ್ಣ ಒಳ್ಳೆಯ ಕೆಲಸ ಸಾಧ್ಯವಿಲ್ಲ. ಆದರೆ ಶೇಕಡ ೫೦ರಷ್ಟಿರುವ ಅವರ ಕೆಟ್ಟುದನ್ನು ಕೈಬಿಟ್ಟು ಶೇಕಡ ೫೦ರಷ್ಟಿರುವ ಇವರ ಒಳ್ಳೆಯದನ್ನು ಕೈಗೆತ್ತಿಕೊಂಡರೆ ಇಬ್ಬರಲ್ಲಿರುವ ಒಳ್ಳೆಯದೂ ಒಟ್ಟಿಗೆ ಸೇರುತ್ತದೆ. ಆಗ ಶೇಕಡ ೧೦೦ರಷ್ಟು ಕೆಲಸ ಸಾಧ್ಯವಾಗುತ್ತದೆ.

ಇಂತಹ ಸಾಧನೆಗೆ ಒಳ್ಳೆಯದನ್ನು ಗುರುತಿಸುವ ಗುಣ, ಸಂಘಟನೆಯ ಸಾಮರ್ಥ್ಯ, ನಿರ್ವಹಣೆಯ ನಿಷ್ಠೆ ಇವುಗಳ ಸೂಕ್ಷ್ಮ ಪ್ರಜ್ಞೆ ಬೇಕು. ಏರುಪೇರಿಲ್ಲದೆ ತಕ್ಕಡಿಯನ್ನು ಹಿಡಿಯುವ ಪ್ರಾಮಾಣಿಕತೆ ಬೇಕು. ಎಲ್ಲಕ್ಕಿಂತ ಮಿಗಿಲಾಗಿ ಒಳ್ಳೆಯದನ್ನು ಸಾಧಿಸುವ ಶ್ರದ್ಧೆ ಬೇಕು. ಲೋಕ ವ್ಯವಹಾರವೆಂದರೆ ಅದು.

ಅಂತಹ ಲೋಕವ್ಯವಹಾರದವರು ಶ್ರೀ ದೇಶಹಳ್ಳಿ ಜಿ. ನಾರಾಯಣ. ಸಾಮಾಜಿಕ ಕ್ಷೇತ್ರದಲ್ಲಿ ಇಂತಹವರು ವಿರಳ. ವ್ಯಕ್ತಿ ಬಲು ಸರಳ.

ನಾರಾಯಣ ಅವರು ನೋಟಕ್ಕೆ ಸರ್ವ ಸಾಧಾರಣ ವ್ಯಕ್ತಿ. ಆದರೆ ಅವರೇ ಒಂದು ಸಂಘಶಕ್ತಿ! ಸಾರ್ವಜನಿಕ ಬದುಕಿನೊಡನೆ ಸುಮಾರು ೩೫ ವರ್ಷಗಳ ನಂಟು. ಕೆಲಸ ಮಾಡದಿದ್ದರೆ ಕಾಯಿಲೆ ಎನ್ನುವ ಈ ವ್ಯಕ್ತಿ ಬಿಡುವಿಲ್ಲದೆ ದುಡಿದು ಹಾಸಿಗೆ ಹಿಡಿದುದೂ ಉಂಟು! ಮನದಲ್ಲಿ ಸದಾ ಶಾಂತಿ; ಕೃತಿಯಲ್ಲಿ ಭ್ರಾಂತಿಯಿಲ್ಲದ ಮೌನ ಕ್ರಾಂತಿ! ತನ್ನ ಗರ್ಭದಲ್ಲಿ ಏನೆಲ್ಲ ಅಡಗಿಸಿಕೊಳ್ಳಬಲ್ಲ ಸಾಗರದಂತೆ ಶ್ರೀ ನಾರಾಯಣ!

ಕಾಲಿಡುವ ಮುನ್ನ ನೂರು ಬಾರಿ ಎಣಿಸುವ ಮುನ್ನೆಚ್ಚರ; ಕಾಲಿಟ್ಟ ಮೇಲೆ ಕಲ್ಲು ಮುಳ್ಳಿದ್ದರೂ ಲೆಕ್ಕಿಸದ ಗಣಾಚಾರ! 'ಅನುಭವದ ಅಲಗ ಅವಧಾನ ತಪ್ಪದೆ ಹಿಡಿವ ಭೃತ್ಯಾಚಾರ'! ಅದ್ಭುತ ಸನ್ನಿವೇಶ ಪ್ರಜ್ಞೆ, ಆ ಪ್ರಜ್ಞೆಯ ಸುತ್ತ ಅವರ ವ್ಯವಹಾರ-ಆಕ್ಸಿಲ್‌ಗೆ ಹೊಂದಿಕೊಂಡು ಸುತ್ತುವ ಚಕ್ರದಂತೆ!

ಶ್ರೀ ನಾರಾಯಣ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನವರು. ದೇಶಹಳ್ಳಿಯಲ್ಲಿ ಹುಟ್ಟಿದವರು(ಈಗ ದೇಶಕ್ಕೆ ಬೇಕಾದವರು!) ಅವರ ತೊಟ್ಟಿಲು ತೂಗಿದುದು ಸಾಮಾನ್ಯ ರೈತ ಕುಟುಂಬ. ಲಾಲಿ ಹಾಡಿದುದು ಹೊಲಗದ್ದೆಗಳ ಮೇಲೆ ಬೀಸಿದ ಗಾಳಿ(ಇದಕ್ಕಿಂತ ಹೆಚ್ಚೇನು ಬೇಕು ಹೇಳಿ!) ಹುಟ್ಟಿದ ವರ್ಷ ೧೯೨೪.

ಚನ್ನಪಟ್ಟಣದಲ್ಲಿ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರವೇಶ. ಶಾಲೆಗೆ ಶರಣು. ಹಿರಿಯ ರಾಜಕಾರಣಿ ಹೆಚ್.ಕೆ. ವೀರಣ್ಣಗೌಡರ ಮಾರ್ಗ ದರ್ಶನ. ಮಹಾತ್ಮಗಾಂಧಿ ಅವರ ತತ್ತ್ವಗಳ ಅಧ್ಯಯನ. 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಕ್ರಿಯಾತ್ಮಕವಾದ ಪಾತ್ರ ಪರಿಣಾಮವಾಗಿ ಬೆಳಗಾವಿ ಜೈಲಿನಲ್ಲಿ ಆತಿಥ್ಯ. ಹುಟ್ಟು ಹೋರಾಟಗಾರ ನಾರಾಯಣ ಅವರಿಗೆ ಜೈಲುವಾಸ ಬಂಧನವಾಗಲಿಲ್ಲ; ಹೊಸ ವಿಚಾರ ಮಂಥನಕ್ಕೆ ಸ್ಫೂರ್ತಿ ನೀಡಿತು. ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳತ್ತ ಒಲವು ಮೂಡಿಸಿತು.

ಶ್ರೀ ನಾರಾಯಣ ನಿಷ್ಠಾವಂತ ಕಾಂಗ್ರೆಸಿಗರಾಗಿ ಮುವ್ವತ್ತು ವರ್ಷ ದುಡಿದಿದ್ದಾರೆ. ಹಳೆಯ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಯುತ್ತಿದ್ದಾಗ ಹಗಲಿರುಳೆನ್ನದೆ ಕಾಂಗ್ರೆಸ್ ಕಛೇರಿಯಲ್ಲಿ ಕೆಲಸ ಮಾಡಿದ್ದಾರೆ ಆಗಿನ ಹೋರಾಟದ ಮುಖವಾಣಿಯಾಗಿದ್ದ 'ವಾರ್ತಾ' ಪತ್ರಿಕೆಗೆ ಅವರೇ ಮ್ಯಾನೇಜರ್.

ಸ್ವಾತಂತ್ರ್ಯಾನಂತರ ಜೊತೆಯ ಕೆಲವು ಹೋರಾಟ

* ನಂ.406, ಪ್ರಣಾಮ 3ನೇ ಕ್ರಾಸ್, ಐಡಿಯಲ್ ಹೋಮ್ ಟೌನ್‌ಶಿಪ್, ರಾಜರಾಜೇಶ್ವರಿನಗರ, ಬೆಂಗಳೂರು.

ಗಾರರು ತಮ್ಮ ಹೋರಾಟಕ್ಕೆ 'ಪ್ರತಿಫಲ' ಪಡೆಯುವ ಗಡಿಬಿಡಿಯಲ್ಲಿದ್ದಾಗ, ಈ ಸೌಜನ್ಯದ ವ್ಯಕ್ತಿ ಯಾವ ಸದ್ದುಗದ್ದಲವೂ ಇಲ್ಲದೆ ಚಾಮರಾಜಪೇಟೆಯಲ್ಲಿ ಸಣ್ಣ ಮುದ್ರಣಾಲಯವೊಂದನ್ನು ಆರಂಭಿಸುವ ಕೆಲಸದಲ್ಲಿ ತೊಡಗಿದ್ದರು. ಆಗ ಸರ್ಕಾರ ನಡೆಸುತ್ತಿದ್ದ ಪ್ರಮುಖರೆಲ್ಲರ ಪರಿಚಯವೂ ಇತ್ತು. ಆದರೆ ಅದರ 'ಲಾಭ' ಪಡೆಯಲು ಹೋಗಲಿಲ್ಲ.

ನಾರಾಯಣ ಸ್ವಾಭಿಮಾನಿ. ಮಿಗಿಲಾಗಿ ದೇಶಾಭಿಮಾನಿ. ಪ್ರಜಾಪ್ರಭುತ್ವದಲ್ಲಿ ಅಚಲ ವಿಶ್ವಾಸ. 'ವ್ಯಕ್ತಿಗೆ ಘನತೆ-ಗೌರವಗಳು ಬರುವುದು ಅಧಿಕಾರದಿಂದಲ್ಲ; ಅವನು ಸಲ್ಲಿಸುವ ಸೇವೆಯಿಂದ' ಎನ್ನುವ ಸಿದ್ಧಾಂತ!.

ರಾಜಕಾರಣಿಯಾದರೂ ರಾಜಕಾರಣವನ್ನು ಜನಸೇವೆಗೆ ಪಳಗಿಸಿದ ಜಾಣ್ಮೆ. ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಅಧಿಕಾರ ಅಥವಾ ಸ್ಥಾನಮಾನದ ಸರ್ಪ ಕಚ್ಚಿದರೆ ಬಲು ಕಷ್ಟ. ಅದರಿಂದ ಅಹಂಕಾರದ ಅಮಲು ತಲೆಗೇರುತ್ತದೆ. ಮುಂದಾಲೋಚನೆ ಮರೆಯಾಗುತ್ತದೆ. ಆದರೆ ನಾರಾಯಣ ಇದಕ್ಕೆ ಅವಕಾಶ ಕೊಡಲಿಲ್ಲ. ಅಧಿಕಾರಕ್ಕೆ ಆಳಾಗಲಿಲ್ಲ; ಸ್ಥಾನಮಾನಕ್ಕೆ ಸೋಲಲಿಲ್ಲ. ಅವರ ಬದುಕಿನಲ್ಲಿ ಅಧಿಕಾರವೇ ಅವರಿಗೆ ಆಳಾಗಿ ದುಡಿದಿದೆ; ಸ್ಥಾನಮಾನವೇ ಶರಣಾಗಿದೆ!

ಬೆಂಗಳೂರು ನಗರ ಕಾರ್ಪೊರೇಷನ್ನಿಗೆ ನಾರಾಯಣ ಅವರಿಂದ ಸಂದ ಸೇವೆ ಸ್ಮರಣೀಯ. ಕಾರ್ಪೊರೇಷನ್ 'ವರ್ಕ್ಸ್ ಕಮಿಟಿ' ಅಧ್ಯಕ್ಷತೆ ಸಾಮಾನ್ಯವಾಗಿ ವರ್ಷಕ್ಕೊಮ್ಮೆ ಬದಲಾವಣೆ. ಆದರೆ ನಾರಾಯಣರ ಅವಧಿ ನಾಲ್ಕು ವರ್ಷ. ಆ ಅವಧಿಯಲ್ಲಿ ನಗರಾಭಿವೃದ್ಧಿ ಕಾಮಗಾರಿ ವ್ಯವಸ್ಥೆಯಲ್ಲಿ ಹೊಸ ತಿರುವು. ಪ್ರತಿನಿಧಿ, ಅಧಿಕಾರಿಗಳ ಸಮನ್ವಯ. ವಿಭಾಗವಾರು ಯೋಜಿತ ಕಾರ್ಯಾನುಸರಣೆ. 'ಮುಚ್ಚಿದ ಗುಂಡಿಯನ್ನೇ ಮತ್ತೆ ಮುಚ್ಚಿ ಬಿಲ್ ಮಾಡುವ ಕಾಮಗಾರಿ ಸಂಪ್ರದಾಯ'ಕ್ಕೆ ಕೊಡಲಿಪೆಟ್ಟು!

ಅವರು ಜಾರಿಗೆ ತಂದ ಕ್ರಮದ ಬಗ್ಗೆ 'ಲಕ್ನೋ ಬುಲೆಟಿನ್'ನಲ್ಲಿ ಪ್ರಶಂಸೆಯ ಪ್ರಸ್ತಾಪ. ಅಖಿಲ ಭಾರತ ಮೇಯರುಗಳ ಸಮ್ಮೇಳನದಲ್ಲಿ ಮುಕ್ತಕಂಠದ ಸ್ವಾಗತ.

ಬೆಂಗಳೂರು ನಗರಕ್ಕೆ ಕಾವೇರಿಯನ್ನು ಕರೆತರುವಲ್ಲಿ ನಾರಾಯಣರ ಪ್ರಯತ್ನ ಕಡಿಮೆಯೇನಲ್ಲ. ಕಾವೇರಿ ಯೋಜನೆಗೆ ಅಡಿಪಾಯ ಬಿದ್ದಾಗ ಅವರೇ ಮೇಯರ್. ನಗರದ ಪ್ರಮುಖ ರಸ್ತೆಗಳಿಗೆ ಕನ್ನಡದ ಹಿರಿಯ ಸಾಹಿತಿಗಳ ನಾಮಕರಣ, ನಗರ ಮಹಾಸಭೆಯ ಕಾರ್ಯಾಲಯದ ಮುಂದೆ ಇತಿಹಾಸ ಪುರುಷ ಕೆಂಪೇಗೌಡನ ಪ್ರತಿಮೆಯ ಅನಾವರಣ, ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಿಗೆ ಪೌರ ಸನ್ಮಾನ. ಹೀಗೆ ಅನೇಕ ಹೊಸ ಸಂಪ್ರದಾಯಗಳಿಗೆ ಕಾರಣ ಜಿ.ನಾರಾಯಣ.

ನಗರ ಕಾರ್ಪೊರೇಷನ್ ಸೇವೆಯಲ್ಲಿ ಅನುಭವ ಅಪಾರ. ಏಕಕಾಲದಲ್ಲಿ ಜನತೆ ಮತ್ತು ಅಧಿಕಾರಿಗಳೊಡನೆ ವ್ಯವಹಾರ. ಕರ್ನಾಟಕ ಗಡಿ ಕ್ರಿಯಾ ಸಮಿತಿ, ಬೆಂಗಳೂರು ಮೆಟ್ರೋ ಪಾಲಿಟನ್ ಮಂಡಳಿ, ಕನ್ನಡ ಭಾಷಾಭಿವೃದ್ಧಿ ಸಮಿತಿ ಮತ್ತು ಸರ್ಕಾರದ ನಾನಾ ಸಮಿತಿಗಳೇ ಅಲ್ಲದೆ ಮೈಸೂರು, ಬೆಂಗಳೂರು ವಿಶ್ವವಿದ್ಯಾನಿಲಯಗಳಲ್ಲೂ ಅವರ ಸೇವೆ ಸಂದಿದೆ. ಮುಖ್ಯರಾಗಿ, ಪೋಷಕರಾಗಿ, ಸದಸ್ಯರಾಗಿರುವ ಸ್ವಯಂ ಸೇವಾ ಸಂಘ ಸಂಸ್ಥೆಗಳೂ ಸಾಕಷ್ಟಿವೆ. ಯಾವುದರಲ್ಲೂ 'ಹೆಸರಿಗೆ ಮಾತ್ರ' ಇದ್ದವರಲ್ಲ. ಎಲ್ಲ ಕಡೆಯೂ ಇವರಿಗೆ ಗೌರವದ ಸ್ಥಾನಮಾನ.

ಅವರು ಪತ್ರಿಕೋದ್ಯಮಿಗಳೂ ಹೌದು. 'ವಿನೋದ'-ಪತ್ರಿಕೋದ್ಯಮಕ್ಕೆ ಅವರು ನೀಡಿರುವ ಕಾಣಿಕೆ. ೧೯೫೦ರಷ್ಟು ಹಿಂದೆಯೇ ಪ್ರಕಟಣೆಯ ಆರಂಭ. ಅಂದಿನಿಂದ ಅವರೇ ಸಂಪಾದಕರು ಮತ್ತು ಪ್ರಕಾಶಕರು. 'ವಿನೋದ' ಹಾಸ್ಯಕ್ಕಾಗಿ ಮೀಸಲಾದ ಮಾಸಪತ್ರಿಕೆ. ಹುಟ್ಟಿದಂದಿನಿಂದ ಒಂದು ಸಂಚಿಕೆಯೂ ತಪ್ಪದಂತೆ ಬೆಳೆದು, ಬೆಳ್ಳಿಹಬ್ಬ ಆಚರಿಸಿದ ಹೆಗ್ಗಳಿಕೆ. ಕನ್ನಡದಲ್ಲಿ ಸದ್ಯಕ್ಕೆ ಇದೊಂದೇ ಹಾಸ್ಯ ಪತ್ರಿಕೆ.

ಗಂಭೀರವಾಗಿ ಕಂಡರೂ ನಾರಾಯಣ ಅವರು ವಿನೋದಪ್ರಿಯರೆಂಬುದಕ್ಕೆ 'ವಿನೋದ'ವೇ ಸಾಕ್ಷಿ. 'ನಿಮ್ಮ ಪತ್ರಿಕೆ ಹೆಚ್ಚು ಪುಟಗಳಿಂದ ಮೈತುಂಬಿ ಬರಲಿ' ಎಂದು ನಾವೆಂದರೆ, 'ನೋಡಿದವರ್ಗೆ ನಗೆ ಬರಬೇಕಾದರೆ ಬಡಕಲಾಗೇ ಇರಬೇಕು' ಎನ್ನುವ ವಿನೋದ!

ಬೇರಾವ ಕ್ಷೇತ್ರದಲ್ಲಿ ನಾರಾಯಣರ ಸೇವೆ ಏನೇ ಇರಲಿ, ಅದೆಲ್ಲಕ್ಕೂ ಹೊನ್ನ ಕಲಶ ಅವರು ನಿರ್ವಹಿಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷತೆ. ಅವರ ಪ್ರಯತ್ನದ ಫಲವಾಗಿ ಗೂಡಿನ ಹಕ್ಕಿಯಾಗಿದ್ದ ಪರಿಷತ್ ಪಕ್ಷಿ ನಾಡಿನಲ್ಲೆಲ್ಲ ಹಾರಾಡಿತು; ಸಾಹಿತ್ಯ ಸಂದೇಶ ಸಾರಿತು. ನೋಡದವರೆಲ್ಲ ನೋಡಿದರು; ಕೇಳದವರೆಲ್ಲ ಕೇಳಿದರು!





ಅದು ಹೇಗಾದೀತು? ಅವರೇನು ಸಾಹಿತಿಯೇ? ಯಾವ ಪುಸ್ತಕ ಬರೆದಿದ್ದಾರೆ? ಸಂಸ್ಕೃತದ ಪರಿಚಯ ವಿದೆಯೆ? ಇಂಗ್ಲೀಷ್ ಪದವಿ ಇದೆಯೆ?(ಪ್ಯಾಂಟು ಧರಿಸುತ್ತಾರೆಯೆ?) ರಾಜಕಾರಣಿ ಎತ್ತ; ರಾಘವಾಂಕ ಎತ್ತ? ಪುರಸಭೆ ಎಲ್ಲಿ, ಪರಿಷತ್ತು ಎಲ್ಲಿ? ಇನ್ನು ಕನ್ನಡ ದೇಗುಲದ ಗತಿಯೇನು?

ಇವು ನಾರಾಯಣ ಅವರು ಪರಿಷತ್ತಿನ ಅಧ್ಯಕ್ಷ ಗಾದಿಗೆ ಸ್ಪರ್ಧಿಸಿದಾಗ ಸದ್ದು ಮಾಡಿದ ಪ್ರಶ್ನೆಗಳು. ಆಗ ನಾರಾಯಣರಲ್ಲಿ ಕೂಡಲೇ ಕೊಡುವ ಉತ್ತರಗಳಿರಲಿಲ್ಲ. ಆದರೆ, ಕ್ರಮೇಣ ಕೊಟ್ಟೇನೆಂಬ ವಿಶ್ವಾಸವಿತ್ತು.

ನಿಜ, ನಾರಾಯಣ ಶಬ್ದ-ಶಾಸ್ತ್ರ, ತರ್ಕ-ಆಗಮಗಳನ್ನು ಅಭ್ಯಾಸ ಮಾಡಿದವರಲ್ಲ; ಕಲಿ ಕಲಿತು ಉಲಿವ ಹವ್ಯಾಸದವರೂ ಅಲ್ಲ. ಅವರ ವಿದ್ಯೆ, ಪದವಿ ಎಲ್ಲ ಲೋಕಾನುಭವ; ಸಮಯ ಪ್ರಜ್ಞೆ.

ಅಧ್ಯಕ್ಷರಾಗುವ ಮುನ್ನವೇ ಪರಿಷತ್ತಿನ ಚಟುವಟಿಕೆಗಳ ನಿಕಟ ಗಮನ. ಕೆಲಸ ಮಾಡಲು ವಿಸ್ತಾರ ಅವಕಾಶವಿರುವುದನ್ನು ಕಂಡುಕೊಂಡ 'ಎಕ್ಸರೇ' ದೃಷ್ಟಿ. ಅಧ್ಯಕ್ಷರಾದುದು ೧೯೭೮ರಲ್ಲಿ. ನಂತರ ಅವರು ಮಾಡಿರುವ ಕೆಲಸ ಅದ್ಭುತ; ಅಪೂರ್ವ. ಪುರುಸೊತ್ತಿಲ್ಲದೆ ಪರಿಷತ್ತಿಗಾಗಿ ದುಡಿದವರು ಅವರೊಬ್ಬರೇ ಎಂದರೆ ಹೆಚ್ಚೇನಲ್ಲ.

ಕನ್ನಡ ಸಾಹಿತ್ಯ ಪರಿಷತ್ತು ಈಗ ನಾಡಿನಾದ್ಯಾಂತ ಮನೆಮಾತು. ಇಲ್ಲಷ್ಟೇ ಅಲ್ಲ; ಭಾರತದಲ್ಲೆಲ್ಲ. ಪರಿಷತ್ತನ್ನು ಈ ಎತ್ತರಕ್ಕೆ ಬೆಳೆಸಲು ನಾರಾಯಣ ಕೈಗೊಂಡ ಕ್ರಮ ಒಂದೆರಡಲ್ಲ.

ಯೋಚನೆ, ಯೋಜನೆ, ನಿರ್ವಹಣೆ- ಇವು ನಾರಾಯಣರ ಕಾರ್ಯಸೂತ್ರ. ಪರಿಷತ್ತು ಮೊಟ್ಟಮೊದಲ ಬಾರಿಗೆ ಪಡೆದುದು ತ್ರೈವಾರ್ಷಿಕ ಯೋಜನೆ; ನಂತರ ಪಂಚವಾರ್ಷಿಕ ಯೋಜನೆ.

ಯಾವ ಯೋಜನೆಯೇ ಇರಲಿ, ಸರ್ಕಾರದ ನೆರವು, ಸಾರ್ವಜನಿಕರ • ಸಹಕಾರ ಪಡೆಯುವಲ್ಲಿ ನಾರಾಯಣ ಅವರದು ಸಿದ್ಧಹಸ್ತ. ತ್ರೈವಾರ್ಷಿಕ ಹಾಗೂ ಪಂಚವಾರ್ಷಿಕ ಯೋಜನೆಗಳು, ಕನ್ನಡ ನಿಘಂಟುಗಳು, ಸಂಕ್ಷಿಪ್ತ ನಿಘಂತು. ರತ್ನಕೋಶ, ಹಳೆಗನ್ನಡ ಕೃತಿಗಳ ಅನುವಾದ, ವಾರ್ಷಿಕ ಸಹಾಯ. ಹೀಗೆ ತಮ್ಮ ಅವಧಿಯಲ್ಲಿ ಪರಿಷತ್ತಿಗೆ ಸರ್ಕಾರದಿಂದ ಸುಮಾರು ಒಂದು ಕೋಟಿ ರೂಗಳ ನೆರವು ಒದಗಿಸಿಕೊಟ್ಟ ಸಾಹಸ.

ಈ ಲೇಖಕನ ನೆನಪಿನಲ್ಲಿದೆ; ಪರಿಷತ್ತಿನ ಸಭಾಂಗಣದಲ್ಲಿ ಒಂದು ಸಮಾರಂಭ ಅಂದಿನ ಆರ್ಥಿಕ ಸಚಿವ ಶ್ರೀ ಎಂ.ವೈ. ಘೋರ್ಪಡೆ ಮುಖ್ಯ ಅತಿಥಿ. ಅವರು ತಮ್ಮ ಭಾಷಣದಲ್ಲಿ 'ಪರಿಷತ್ತಿಗೆ ಕೊಟ್ಟ ಪ್ರತಿಯೊಂದು ಕಾಸೂ ಸಾರ್ಥಕವಾಗುತ್ತದೆಂಬ ವಿಶ್ವಾಸ ಸರ್ಕಾರಕ್ಕಿದೆ. ಆದ್ದರಿಂದ ಪರಿಷತ್ತಿಗೆ ಹಣದ ಕೊರತೆಯಾಗದಂತೆ ನೋಡಿಕೊಳ್ಳುವ ಭರವಸೆ ಕೊಡುತ್ತೇನೆ. ಅದರಲ್ಲೂ ನಾರಾಯಣ ಅವರಂತಹ ಅಧ್ಯಕ್ಷರಿರುವಾಗ ನಮಗೆ ಭಯವಿಲ್ಲ' ಎಂದಿದ್ದರು. ನಾರಾಯಣ ಅವರ ಪ್ರಾಮಾಣಿಕತೆಗೆ, ಕಾರ್ಯದಕ್ಷತೆಗೆ ಈ ಮಾತುಗಳು ಸಾಕೆಂದು ಕಾಣುತ್ತದೆ.

ಪರಿಷತ್ತಿನ ಸುವರ್ಣಮಹೋತ್ಸವ, ವಜ್ರಮಹೋತ್ಸವ ಮತ್ತು ದೆಹಲಿಯ ಸಾಹಿತ್ಯ ಸಮ್ಮೇಳನಗಳು ನಾರಾಯಣ ಅವರ ಸಂಘಟನಾಶಕ್ತಿಗೆ ಸುಂದರಸಾಕ್ಷಿಗಳು; ಪರಿಷತ್ತಿಗೆ ಅಖಿಲ ಭಾರತ ಕೀರ್ತಿ ತಂದುಕೊಟ್ಟ ಸಾಹಿತ್ಯೋತ್ಸವಗಳು. ಕನ್ನಡ ಸಾಹಿತ್ಯ-ಸಂಸ್ಕೃತಿಗಳ ಹಿತಚಿಂತನೆಯ ಜೊತೆಗೆ ಸಮಗ್ರ ಭಾರತದ ಸೌಹಾರ್ದದ ದೃಷ್ಟಿ, ಪರಿಷತ್ತಿಗೆ ವಿಶ್ವವ್ಯಾಪ್ತಿ ಕೊಡುವ ಆಶಯ. ಈ ಉತ್ಸವಗಳಲ್ಲಿ ಅವರು ಯೋಜಿಸಿದ 'ಅಂತರಭಾರತಿ' ವೇದಿಕೆ ಭಾಷಾ ಬಾಂಧವ್ಯ ಮತ್ತು ರಾಷ್ಟ್ರೀಯ ಭಾವೈಕ್ಯತೆಯ ಮಧುರ ಸಂಕೇತ.

'ಪರಿಷತ್ತು ಕೇವಲ ಪಂಡಿತರ ಸೊತ್ತಾಗಬಾರದು. ಹಳ್ಳಿಯಿಂದ ದಿಲ್ಲಿಯವರೆಗೆ ಕನ್ನಡ ಸಾಹಿತ್ಯದ ಕಂಪು ಹರಡಬೇಕು. ಜನಸಾಮಾನ್ಯರೂ ಸಾಹಿತ್ಯದ ಸಂಪರ್ಕ ಪಡೆಯಬೇಕು. ಸಾಹಿತ್ಯ ಸೃಷ್ಟಿಸುವಾಗ ಅಂತಹ ಜನಸಾಮಾನ್ಯರನ್ನು ಸಾಹಿತಿಗಳು ದೃಷ್ಟಿಯಲ್ಲಿಟ್ಟುಕೊಳ್ಳಬೇಕು. ನಮಗೆ ಬೇಕಾಗಿರುವುದು ಭಾವಲೋಕ ವಿಹಾರಕ್ಕಿಂತ ವಾಸ್ತವ ಲೋಕ ವಿಚಾರ' ಎನ್ನುವುದು ನಾರಾಯಣ ಅವರ ನೇರ ಅಭಿಪ್ರಾಯ.

ಪರಿಷತ್ತಿನ ಗ್ರಂಥ ಪ್ರಕಟಣಾ ಕಾರ್ಯದಲ್ಲಿ ನಾರಾಯಣ ಅವರು ಅಧ್ಯಕ್ಷರಾಗಿದ್ದ ಅವಧಿ ಒಂದು ಅದ್ವಿತೀಯ ದಾಖಲೆ. ಪರಿಷತ್ತು ಆರಂಭವಾದ ೫೫ವರ್ಷಗಳಲ್ಲಿ ೫೦ ಗ್ರಂಥಗಳು ಪ್ರಕಟಣೆಯಾಗಿದ್ದರೆ, ಅವರ ಅವಧಿಯ ೮-೯ವರ್ಷಗಳಲ್ಲಿ ೨೫೦ ಗ್ರಂಥಗಳ ಪ್ರಕಟಣೆ.

ಪ್ರತಿಯೊಂದು ಪ್ರಕಾರದಲ್ಲಿ ಪ್ರಾತಿನಿಧ್ಯ. ಸಾಮಾನ್ಯ ಓದುಗರಿಗಾಗಿ ೨೦ ಹಳೆಗನ್ನಡ ಸಾಹಿತ್ಯಕೃತಿಗಳ ಸರಳಾನುವಾದ ಪ್ರಕಟಣೆ ಒಂದು ವಿಶೇಷ ಕಾರ್ಯ.

ಸಂಘಟನೆಗೆ ಮತ್ತೊಂದು ಹೆಸರು ನಾರಾಯಣ. ಯುವ ಬರಹಗಾರರ ಶಿಬಿರ, ಮಹಿಳಾ ಲೇಖಕಿಯರ ಗೋಷ್ಠಿ, ವಯಸ್ಕರ ಶಿಕ್ಷಣ ತರಗತಿಗಳು, ಪರಿಷತ್ತಿನ ಜಿಲ್ಲಾ ಶಾಖೆಗಳ ರಚನೆ, ಅಂತರರಾಷ್ಟ್ರೀಯ ಮಹಿಳಾ ವರ್ಷಾಚರಣೆ ಗಮಕ ಸಮ್ಮೇಳನ, ಕೀರ್ತನ ಸಮ್ಮೇಳನ, ಜನಪದ ಕಲಾವಿದರ ಸಮ್ಮೇಳನ, ಸಾಹಿತ್ಯ ಪ್ರಚಾರ ಕಾರ್ಯ, ಪುಸ್ತಕ ಪ್ರದರ್ಶನ. ಇವೆಲ್ಲ ಅವರ ಸಂಘಟನಾ ಸಾಮರ್ಥ್ಯದ ಫಲಶ್ರುತಿ. ಪರಿಷತ್ತಿನ ಇತಿಹಾಸದಲ್ಲಿ ಇವೆಲ್ಲ ಪ್ರಥಮ ದಾಖಲೆಗಳು.

ಅನುಕೂಲಗಳು ಒದಗಿದಾಗ ಸಾಹಿತ್ಯ ಸಮ್ಮೇಳನಗಳು ನಡೆಸುವುದನ್ನು ಬಿಟ್ಟರೆ ಉಳಿದಂತೆ ಮೌನವಾಗಿರುತ್ತಿದ್ದ ಪರಿಷತ್ತಿನ ಕಾರ್ಯಾಲಯ ಅವರ ಕಾಲದಲ್ಲಿ ನಿತ್ಯ ಚಟುವಟಿಕೆಗಳ ಕೇಂದ್ರವಾಯಿತು. ಪರಿಷತ್ತಿನ 'ಸರಸ್ವತೀ ಭಂಡಾರ' ಆಕರ ಗ್ರಂಥಗಳ ಆಸಕ್ತ ಓದುಗರ ಸಾಗರವಾಯಿತು. ಸ್ಥಿರ ಪುಸ್ತಕ ಪ್ರದರ್ಶನ, ಓಲೆಗರಿಗಳ ಸಂಗ್ರಹ, ಶಾಸನಗಳ ಅಧ್ಯಯನ, ಜಾನಪದ ಸಂಗ್ರಹ, ಗಮಕ ತರಗತಿಗಳು, ಕನ್ನಡ ಶೀಘ್ರಲಿಪಿ ತರಗತಿಗಳು, ಸಭೆ-ಸಮಾರಂಭಗಳು ಹೀಗೆ ನಿರಂತರ ಕಾರ್ಯ ಚಟುವಟಿಕೆಗಳು ಆರಂಭವಾದವು.

ನಾರಾಅಣ ಅವರು ಅಧ್ಯಕ್ಷರಾದ ಮೇಲೆ ಮನೆಗಿಂತ ಪರಿಷತ್ತಿನ ಕರ್ಯಾಲಯದಲ್ಲಿದ್ದುದೇ ಹೆಚ್ಚು. ಪರಿಷತ್ತಿನ ಕಾರ್ಯವೆಂದರೆ ಅಚ್ಚುಮೆಚ್ಚು. ಯಾವ ಕೆಲಸ ಹಿಡಿದರೂ ಪಟ್ಟು ಹಿಡಿದು ಮುಗಿಸುವ ಶ್ರದ್ಧೆ. ಇಂದು ನಾವು ಕಾಣುವ ಪರಿಷತ್ತಿನ ಸುಂದರ ಸುವರ್ಣ ಮಹೋತ್ಸವ ಮತ್ತು ವಜ್ರ ಮಹೋತ್ಸವ ಕಟ್ಟಡಗಳ ಕೀರ್ತಿ ಅವರಿಗೇ ಸಲ್ಲಬೇಕು.

ನಾರಾಯಣ ಅವರ ಮತ್ತೊಂದು ಮಹತ್ ಸಾಧನೆ ಜಾನಪದ ಅಭಿವೃದ್ಧಿಯ ಯೋಜನೆ, 'ಏನು ವಿಚಿತ್ರ? ಪರಿಷತ್ತು ವಿದ್ವಾಂಸರ ವೇದಿಕೆ. ಇಲ್ಲಿಗೆ ಅನಕ್ಷರಸ್ಥರ ವಿಷಯವೇಕೆ?' ಎಂದು ಕೆಲವರು ಹುಬ್ಬೇರಿಸಿದುದೂ ಉಂಟು. ಆದರೂ ನಾರಾಯಣ ಹಿಂದೆ ಸರಿಯಲಿಲ್ಲ. ಆ ಕಾರ್ಯದಲ್ಲಿ ಈ ಲೇಖಕನನ್ನು ಬಳಸಿಕೊಂಡರು. ಆಗ ಅವರಿತ್ತ ಪ್ರೋತ್ಸಾಹ, ಸಹಕಾರಗಳು ಹೃದಯ ತುಂಬುವಂತಹವು. ಕನ್ನಡ ಜಾನಪದದ ಇತಿಹಾಸದಲ್ಲೇ ನಡೆಯದ ಕೆಲಸ. ಪ್ರಪ್ರಥಮ ಬಾರಿಗೆ ಇಡೀ ನಾಡಿನ ಜನಪದ ಕಲೆಗಳ ಮಾಹಿತಿ ಸಂಗ್ರಹ, ಜಿಲ್ಲಾ ಮತ್ತು ರಾಜ್ಯಮಟ್ಟದ ಕಲಾಮೇಳ, ಗ್ರಂಥ ಪ್ರಕಟಣೆ, ಸಾಕ್ಷ್ಯಚಿತ್ರ ತಯಾರಿಕೆ, ಜನಪದ ಕಲಾವಿದರ ಮಾಸಾಶನಕ್ಕಾಗಿ ಸರ್ಕಾರಕ್ಕೆ ಶಿಫಾರಸು. ಹೀಗೆ ಪ್ರಮಾಣದ ಕೆಲಸ ನಡೆದಿದೆ.

ನಾರಾಯಣ ಅವರ ಮತ್ತೊಂದು ಸೇವಾ ದಾಖಲೆಯೆಂದರೆ ಕರ್ನಾಟಕ ಪತ್ರಿಕಾ ಅಕಾಡಮಿ ಅಧ್ಯಕ್ಷರಾಗಿ ಮಾಡಿದ ಕೆಲಸ. ಇಡೀ ರಾಜ್ಯಾದಂತ ಪತ್ರಿಕೋದ್ಯಮದ ಕಡೆ ಸಾರ್ವಜನಿಕ ಗಮನ ಸೆಳೆದ ಅವರು ಪತ್ರಿಕೋದ್ಯಮದ ೧೪೫ನೇ ವರ್ಷಾಚರಣೆಯನ್ನು ಅತ್ಯಂತ ಸಾರ್ಥಕವಾಗಿ ನಡೆಸಿದರು. ಅವರ ಕಾಲದಲ್ಲಿ ಪತ್ರಿಕಾ ಅಕಾಡಮಿಯಿಂದ ಪತ್ರಿಕೋದ್ಯಮಕ್ಕೆ ಸಂಬಂಧಿಸಿದ ೨೫ಕ್ಕೂ ಹೆಚ್ಚು ಕನ್ನಡ ಕೃತಿಗಳು ಪ್ರಕಟವಾಗಿವೆ. ಕನ್ನಡ ಪತ್ರಿಕೋದ್ಯಮ ಕುರಿತು ಪ್ರಥಮ ಬಾರಿಗೆ ಸಾಕ್ಷ್ಯ ಚಿತ್ರವೊಂದನ್ನು ನಿರ್ಮಿಸಲಾಗಿದೆ.

ವ್ಯವಹಾರ ಜಾಣ್ಮೆಯ ಒಂದು ವಿಶ್ವವಿದ್ಯಾಲಯ ಶ್ರೀ ನಾರಾಯಣ. ಎಲ್ಲರೊಡನೆಯೂ ಒಂದೇ ಬಗೆಯ ಸರಸ. ಸಜ್ಜನಿಕೆ. ಕೈಹಿಡಿದ ಕೆಲಸಕ್ಕೆ ನಿಷ್ಠೆಯ ಗೊಬ್ಬರ, ಪ್ರಾಮಾಣಿಕತೆಯ ನೀರು ಎರೆದು, ಕಳೆ ತೆಗೆದು ಬೆಳೆ ಬೆಳೆಯುವ ಕೃಷಿ ಕಲೆ. ಎಂತಲೇ ಅವರ ಕೆಲಸಕ್ಕೆ ಅಷ್ಟು ಬೆಲೆ!

'ನಮ್ಮ ವಯಸ್ಕರಲ್ಲಿ ಸಾಕ್ಷರತೆ ಬೆಳೆಯುವುದು ಬಹು ಮುಖ್ಯ. ಅದರಿಂದ ಅವರಲ್ಲಿ ಭಾಷೆ ಸಾಹಿತ್ಯಗಳ ಅಭಿಮಾನ ಮೂಡುತ್ತದೆ. ತಮ್ಮ ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ಅವರು ಮಹತ್ವ ಕೊಡುತ್ತಾರೆ'.

'ನಮ್ಮ ಸಾಮಾಜಿಕ ಜೀವನವೆಲ್ಲ ಕೆಟ್ಟಿದೆ ಎಂದು ನಾನು ಒಪ್ಪಲಾರೆ. ಶುಭ್ರ ಬಟ್ಟೆಯ ಮೇಲೆ ಬಿದ್ದ ಕೆಸರು ಪ್ರಧಾನವಾಗಿ ಕಾಣುವಂತೆ, ಸಾಮಾಜಿಕ ಕ್ಷೇತ್ರದ ಅನಿಷ್ಟಗಳೇ ಎದ್ದು ಕಾಣುತ್ತವೆ. ಇದರಿಂದ ಹತಾಶರಾಗಬೇಕಾಗಿಲ್ಲ. ಅನಿಷ್ಟಗಳನ್ನು ಸಂಪೂರ್ಣ ನಿವಾರಣೆ ಮಾಡಲು ಸಾಧ್ಯವೂ ಇಲ್ಲ. ಆದರೆ, ಅವು ಹರಡದಂತೆ ನೋಡಿಕೊಳ್ಳುವುದು ಧಾರ್ಮಿಕ ಹಾಗೂ ನೈತಿಕ ಶಿಕ್ಷಣಗಳಿಂದ ಸಾಧ್ಯವಿದೆ'.

'ನಾವು ದುಡಿಮೆಗೆ ಮೊದಲು ಗಮನ ಕೊಡಬೇಕು. ಸಂಪತ್ತಿನ ಗಳಿಕೆಯ ಜೊತೆಗೆ ನೈತಿಕ ಮೌಲ್ಯದ ಗಳಿಕೆಯೂ





ಮುಖ್ಯ. ಇದಕ್ಕೆ ಶರಣರ ವಚನಗಳು ನಮಗೆ ಮಾರ್ಗದರ್ಶಕ'.

ಆರ್ಥಿಕ, ಧಾರ್ಮಿಕ ಮತ್ತು ಸಾಮಾಜಿಕ ಪ್ರಗತಿಗೆ ಬಸವಣ್ಣನವರ ಮಹಾತತ್ವವನ್ನು ಮನಗಂಡ ಮೇಲೆಯೇ ರಾಷ್ಟ್ರಕವಿ ಕುವೆಂಪು ಅವರು ಪರಿಷತ್ತಿಗೆ ನೀಡಿದ್ದ ಮೂಲ ನಾಡಗೀತೆಗೆ ಬಸವಣ್ಣನವರ ಹೆಸರು ಸೇರಿದ್ದು. ಹಿಂದೆ ಶರಣರು ಕ್ರಾಂತಿ ನಡೆಸದಿದ್ದರೆ ಸಾಹಿತ್ಯ ಮತ್ತು ಸಾಮಾಜಿಕ ದೃಷ್ಟಿಯಿಂದ ನಾವು ಇನ್ನೂ ಬಹಳ ಹಿಂದುಳಿಯುತ್ತಿದ್ದೆವು'

ಇದು ನಾರಾಯಣ ಅವರ ವಿಚಾರಧಾರೆ.

ನಾರಾಯಣ ಅವರು ನಿಂದೆಗೆ ಎಂದೂ ಹಿಂಜರಿದವರಲ್ಲ. 'ಕಿಡಿಕಿಡಿ ಕೆದರಿದರೆ ಎನಗೆ ಹಸಿವು ತೃಷೆ ಅಡಗಿತೆಂಬೆನು' ಎನ್ನುವ ಅಕ್ಕಮಹಾದೇವಿಯ ನಿಷ್ಠೆ 'ಕಾಯದ ಕಳವಳಕ್ಕಂಜಿ ಕಾಯಯ್ಯ' ಎನ್ನದ ಶರಣ ಧರ್ಮದ ಕೆಚ್ಚು. 'ಏರಿ ಕಟ್ಟುವುದು ನಮ್ಮ ಕೆಲಸ, ನೀರು ತುಂಬುವುದು ನಿಸರ್ಗದ ಕೆಲಸ' ಎನ್ನುವ ಕರ್ತವ್ಯಶೀಲತೆ.

'ಗುರುವಾದಡೆಯೂ ಕಾಯಕದಿಂದಲೇ ಮುಕ್ತಿ' ಎನ್ನುವ ಶರಣವಾಣಿಯಂತೆ ಅಧ್ಯಕ್ಷರಾಗಿದ್ದರೂ ಸಾಮಾನ್ಯ ಕಾರ್ಯಕರ್ತರಂತೆ ದುಡಿದವರು ನಾರಾಯಣ. ವಹಿಸಿಕೊಂಡ ಕೆಲಸವನ್ನು ಇಷ್ಟೊಂದು ಅರ್ಪಣ ಮನೋಭಾವದಿಂದ ಮಾಡುವವರು ಅಪರೂಪ. ಕರ್ಮಯೋಗದ ಪರಮ ರಹಸ್ಯ ನಾರಾಯಣರಲ್ಲಿ ನಿಜರೂಪ!

ಧರ್ಮಪತ್ನಿಯ ಹೆಸರು ಶ್ರೀಮತಿ ಯಶೋಧಮ್ಮ. ನಾಲ್ಕು ಮಕ್ಕಳಲ್ಲಿ ಮೂರು ಗಂಡು. ಬಂಧು-ಬಳಗದವರಿಂದ ಸದಾ ತುಂಬಿದ ಮನೆ. ನಗರದಲ್ಲಿದ್ದರೂ ನಗರದ 'ಬಿನ್ನಾಣ'ಕ್ಕೆ ಒಳಗಾಗದ ಸರಳ ಜೀವನ!

ನಾರಾಯಣ ಪರಿಶುದ್ಧ ಕಾಯಕ ಜೀವಿ. 'ಬೆಟ್ಟದಡಿಯ ಹುಲ್ಲಾಗಿ, ಮನೆಗೆ ಮಲ್ಲಿಗೆಯಾಗಿ, ದೀನ ದುರ್ಬಲರಿಗೆ ಜೇನು ಸಕ್ಕರೆಯಾಗಿ' ಎಲ್ಲರಿಗೂ ಬೇಕಾದ ಲೋಕಾನುಭವಿ!. ❖

## ಬಸವ ವಚನಾಮೃತ

ಸುಖ ಬಂದಡೆ ಪುಣ್ಯದ ಫಲವೆನ್ನೆನು
ದುಃಖ ಬಂದಡೆ ಪಾಪದ ಫಲವೆನ್ನೆನು
ನೀ ಮಾಡಿದಡಾಯಿತ್ತೆನ್ನೆನು
ಕರ್ಮಕ್ಕೆ ಕರ್ತೃವೇ ಕಡೆಯೆಂದೆನ್ನೆನು
ಉದಾಸೀನವಿಡಿದು ಶರಣೆನ್ನೆನು
ಕೂಡಲಸಂಗಮದೇವ
ನೀ ಮಾಡಿದುಪದೇಶವು ಎನಗೀ ಪರಿಯಲ್ಲಿ
ಸಂಸಾರವ ಸವೆಯ ಬಳಸುವೆನು

ಬಸವಣ್ಣನವರಂಥವರು ಬೆಲ್ಲವನ್ನೇ ಅಲ್ಲ ಬೇವನ್ನೂ ಸಮರಸವಾಗಿಯೇ ತಿನ್ನುವ (ರಸಿಕ) ರಸಜ್ಞರು. ಅವರಿಗೆ ದುಃಖದ ವೇದನೆಯೇ ಸೋಂಕಿನ ಲವಲೇಶವೂ ಇಲ್ಲದ ಸುಖದ ಕಲ್ಪನೆ ಶುದ್ಧಾಂಗವಾಗಿ ಕಟ್ಟುಕವೆಂಬುದು ಗೊತ್ತು.

ಸುಖವೆಂಬ ತ್ರಿಪುರಸುಂದರಿ ಎಂದಿಗೂ ಬೀದಿಯಲ್ಲಿ ಭಿಕಾರಿಯಂತೆ ಬಿದ್ದಿರುವುದಿಲ್ಲ-ಏಳು ಕಡಲುಗಳಾಚೆ ಏಳು ಸುತ್ತಿನ ಕೋಟೆಯ ನಡುವೆ-ಭಯಂಕರ ರಾಕ್ಷಸರ ಕಡು ಕಾವಲಿನಲ್ಲಿರುವಳು. ಅದನ್ನೆಲ್ಲ ದಾಟಿ ಗೆಲ್ಲಬಲ್ಲ ಧೀರನು ಮಾತ್ರ ಆ ಸುಖ ಸುಂದರಿಯನ್ನು ಅನುಭವಿಸಿಯಾನು. ಮಿಕ್ಕವರು ಮಾತುಮಾತಿಗೆ ಪುಣ್ಯವಿಲ್ಲವೆಂದು, ಪಾಪದ ಫಲವೆಂದು, ದೇವರು ಮಾಡಿದಂತಾಗುವುದೆಂದು, ನಾನು ಮಾಡಿದ ಕರ್ಮವೆಂದು, ಯಾರಿಂದೇನಾಗುವುದೆಂದು-ಹತಾಶೆಯಿಂದ ಉದ್ವೇಗದಿಂದ ಮೂಢತೀರ್ಮಾನದಿಂದ ವಿಧಿವಾದದಿಂದ ಉದಾಸೀನದಿಂದ ನಿಷ್ಪೌರುಷಕ್ಕೆ ಶರಣಾಗತರಾಗುವರು.

ಬಸವಣ್ಣನವರು-ತಮ್ಮ ಗುರುಗಳು ಕೊಟ್ಟ ಉಪದೇಶದ ಬಲದಿಂದ – ಈ ಎಲ್ಲ ದೌರ್ಬಲ್ಯವನ್ನೂ ಮೀರಿ ಜೀವನವನ್ನು ತೊಟ್ಟೂ ಬಿಡದೆ ಗಪ್ಪಚಿತ ಕುಡಿದವರು.

–ಡಾ|| ಎಲ್. ಬಸವರಾಜು
ಮೈಸೂರು

ಆಡುವ ಮಾತಿನ ಹಿಂದೆ, ಮುಂದೆ ಸಮನಾಗಿರಬೇಕು. ಮಾತಿನ ಹಿಂದೆ ಮನಸ್ಸು, ಮಾತಿನ ಮುಂದೆ ಕೆಲಸ. ಮನಸ್ಸಿದ್ದಂತೆಯೇ ಮಾತು. ಮಾತನಾಡಿದಂತೆಯೇ ಕೆಲಸ ಇರಬೇಕಲ್ಲವೆ? ಮನಸ್ಸು ವಿಚಾರಮಾಡಿ ಔಚಿತ್ಯವನ್ನು ಕಂಡುಕೊಂಡು ಒಂದು ನಿರ್ಧಾರಕ್ಕೆ ಬರಬೇಕು. ಮಾತು ಸ್ಪಷ್ಟವಾಗಿ, ನಯವಾಗಿ, ಮಧುರವಾಗಿರಬೇಕು. ಯಾರನ್ನೂ ನೋಯಿಸಬಾರದು. ಕೆಲಸ ಸಮರ್ಥವಾಗಿ ನಿರ್ವಂಚನೆಯಿಂದ ಕೂಡಿರಬೇಕು. ತನ್ನ ಒಳಿತು, ಹೆರವರ ಹಿತ ಎರಡನ್ನೂ ಗಮನದಲ್ಲಿರಿಸಿಕೊಂಡು ನಮ್ಮ ದೇಹ, ಮಾತು, ಮನಸ್ಸು ಮೂರನ್ನೂ ಸೇರ್ಪಡಿಸಿಕೊಂಡು ಬಳಸಿದಾಗಲೇ ಈ ತ್ರಿಕರಣಶುದ್ಧಿ.

–ಪ್ರೊ. ಎಸ್.ಕೆ. ರಾಮಚಂದ್ರರಾವ್



# 'ಮನಃಶಾಂತಿ'

-ಡಾ॥ ಎಂ.ಎಸ್. ಹುಲ್ಲೋಳಿ*

ಇಂದಿನ ಪರಿಸ್ಥಿತಿಯಲ್ಲಿ 'ಮನಃಶಾಂತಿ ಕಾಯ್ದುಕೊಳ್ಳುವುದು ಹೇಗೆ? ಎಂಬ ಪ್ರಶ್ನೆ ಬಹುಜನರ ಮನದಲ್ಲಿ ತಲ್ಲಣ ಉಂಟುಮಾಡುತ್ತಿದೆ. ಜೀವನದಲ್ಲಿ ಅನೇಕ ಎಡರು-ತೊಡರುಗಳು ಬಂದೇ ಬರುತ್ತವೆ. ಅವುಗಳನ್ನು ಎದುರಿಸಲು ಆತ್ಮಸ್ಥೈರ್ಯ ಛಲ ಬೇಕೆಂದು ಶರಣರು ಹೇಳುತ್ತಾರೆ. 'ಛಲಬೇಕು ಶರಣಂಗೆ ಪರಧನ, ಪರಸತಿ, ಪರದೈವ, ಪರ ದ್ರವ್ಯಗಳನ್ನು ಒಲ್ಲೆ ಎಂಬ'. ಇಂತಹ ಛಲವಿಲ್ಲದವರನ್ನು ದೇವರೂ ಮೆಚ್ಚುವುದಿಲ್ಲ ಹಾಗೂ ಅವರೂ ಏನನ್ನೂ ಸಾಧಿಸಲಾರರು.

ದೈಹಿಕ, ಮಾನಸಿಕ, ಸಾಮಾಜಿಕ ವ್ಯಕ್ತಿತ್ವಗಳು ಜೀವನದ ತ್ರಿಕೋನವಾದರೆ, ಆಧ್ಯಾತ್ಮಿಕ ವ್ಯಕ್ತಿತ್ವ ಇದರ ಕೇಂದ್ರ. ವ್ಯಕ್ತಿಯು ಪರಿಪೂರ್ಣತೆಯತ್ತ ಸಾಗುವದು. ಗೌತಮ ಬುದ್ಧ 'ಮನ'ದ ಬಗ್ಗೆ ಹೇಳುತ್ತಾರೆ 'Mind is the forerunner of all activity; mind is the highest of all sensory powers. All relative concepts have their origin in the mind'.

'Mind is the root of all that you express- the power of the mind is great. When thoughts are churned well in the mind, they form words which appear outwardly in action. That is why the mind should be always kept under control. The thoughts formed in the mind come out in two distinct forms, speech and deed. That is why mind should be always kept under control. It is to be observed and remembred that the power of mind is great'.

- Sri Sri Shivakumara Swamiji

'ಮನಸ್ಸು ಶಾಂತವಿಲ್ಲದವನಿಗೆ ಸುಖಶಾಂತಿಗಳು ಸ್ವಪ್ನ ದಲ್ಲಿ ಕೂಡ ದೊರೆಯಲಾರವು'-ಭಗವದ್ಗೀತಾ.

'Happiness- A positive feeling of peace.

In order to be happy, you need to live by your values and choose how you want to live. What is happiness? It is a feeling of inner peace and satisfaction and it is usually experienced when there are no worries, fears or obsessing thoughts. Be your self free from the prision oy your own mind. Happiness seems to be the outcome of positive events, but actually comes from the inside, triggered by outer events, the 'Dalai Lama' in his book-'The Art of Happiness' Says that the very purpose of is happiness'

-Balagangadhara Swamiji

ಜ್ಞಾನಿಯು 'ಅಹಂ'ನಿಂದ ದೂರ ಉಳಿದು ಸ್ವಾತಂತ್ರ್ಯವನ್ನು ಅನುಭವಿಸುತ್ತಾನೆ.

'Mind-Matter Connection-Sadhguru

'Your mind, psychological dimention of who you are, is constantly, looking for variety and so is creating something new. It has nothing to do with the existential. The psychological has nothing to do with reality. The psycological process is your creation. It can be 100 percent concious process. Only when you are blissful, by your own nature-That is you are no more an issue of any kind- you can deal with the issue of existance. When your mind is free of fluctuation will it be capable of reflectiong reality the way it is'

* ನಿವೃತ್ತ ಪ್ರಾಚಾರ್ಯರು, ವಾಸ್ತುತಜ್ಞರು, ಓಂನಗರ, ಹುಬ್ಬಳ್ಳಿ-೫೮೦ ೦೩೧.





'For Inner Engineering programmes'- Physical, mental and spiritual well being.

ಕವಿ-ವಿಜ್ಞಾನಿ-ತತ್ತ್ವಜ್ಞಾನಿಗಳ ಅಭಿವ್ಯಕ್ತಿ ಸ್ವರೂಪವನ್ನು ಡಾ॥ ಸಿದ್ದಯ್ಯ ಪುರಾಣಿಕರ ವಚನ ಚಿತ್ರಿಸಿದೆ.

*'ಋಷಿ ಪ್ರತಿಭೆ ಸರ್ವಭೂತಾನುಕಂಪೆಯೊಡನೆ ಕೂಡಿದಾಗ*
*ರಾಮಾಯಣ ಮಹಾಕಾವ್ಯದ ಉದಯ;*
*ಭೂಪತಿಯ ಸಂಪದಕ್ಕೆ ಅಮರಪ್ರೇಮದ ಪ್ರೇರಣೆ ದೊರೆತಾಗ*
*ಮಹಾಕಲಾಕೃತಿ ತಾಜಮಹಲಿನ ಜನನ;*
*ಯಂತ್ರರ್ಷಿ-ಪರಿಣತಿಗೆ ಸೌಂದರ್ಯಸ್ವಪ್ನವಿದ್ದಾಗ*
*ವೃಂದಾವನ ನಂದನದ ನಿರ್ಮಾಣ;*
*ಮಹಾತ್ಮಾಜಿಗೆ ದಾಸೋದ್ಭೂತ ಅಧೋಗತಿಯ*
*ಕರಾಳ ಚಿತ್ರ ಕಂಡಾಗ*
*ಭಾರತ ಸ್ವಾತಂತ್ರ್ಯದ ಅವತರಣ;*
*ವಿಜ್ಞಾನ ಜ್ಯೋತಿಗೆ ವಿಶ್ವದರ್ಶನ ದೀಪ್ತಿ ಸೇರಿದಾಗ*
*ಸಾಪೇಕ್ಷವಾದದ ಸಮಾಗಮನ;*
*ಸ್ವತಂತ್ರ ಧೀರ ಸಿದ್ಧೇಶ್ವರಾ,*
*ನರನ ಹವಣಿಕೆಗೆ ಹರನ ಹೂಡಿಕೆಗೆ ಒಳಗಾದಾಗ ಶರಣ ಜೀವನದ ಉನ್ಮೀಲನ.'*

The undisciplined mind is like a mud elephant. ಮನವೆಂಬುದು ಮರ್ಕಟನಂತೆ ಹಲವು ರೆಂಬೆ ಕೊಂಬೆಗಳಿಗೆ ಹಾರುತ್ತಲಿರುತ್ತದೆ. ಈ ಮನಸ್ಸಿಗಿರುವ ಶಕ್ತಿ ಅಗಾಧವಾದುದು. ಇಂತಹ ಮನಸ್ಸಿನ ಶಕ್ತಿಯನ್ನು ಒಂದು ಕಡೆ ಕೇಂದ್ರೀಕರಿಸಿ ಹರಿಯಲು ಬಿಟ್ಟರೆ ಅದ್ಭುತ ವಿಸ್ಮಯಗಳನ್ನು ಮಾಡಬಲ್ಲದು. ಚಾಮರಸ ಕವಿ ಹೇಳುವಂತೆ

*'ಮನವು ನಿಂದರೆ ಬಿಂದು ನಿಂದಿಹುದು*
*ಲೀಲೆಯಿಂದ ಬಿಂದು ನಿಂದರೆ,*
*ಕಾಲಕರ್ಮವ ಗೆಲಿದು ಮಾಯೆಯ*
*ಹೇಳ ಹೆಸರಿಲ್ಲೆನಿಸಬಹುದೈ ಬಸವ ಕೇಳೆಂದ'*

ಇಂತಹ ಮಾಯೆಯನ್ನು ಗೆಲ್ಲಬೇಕಾದರೆ ಮನವು ಲಿಂಗದ ಚಿತ್ಕಳೆಯಲ್ಲಿ ನಿಲ್ಲಬೇಕಿದೆ.

ಮನೋವಿಜ್ಞಾನಿಗಳ ಪ್ರಕಾರ ಸಾಂತ್ವನದಿಂದ ಅನೇಕ ಮಾನಸಿಕ ಸಮಸ್ಯೆಗಳಿಗೆ ಪರಿಹಾರ ದೊರಕುತ್ತದೆ. ಮಾನಸಿಕ ಒತ್ತಡಗಳಿಂದ ತುಂಬಿದ ಈ ಒಡಲೆಂಬ ಬಂಡಿಗೆ 'ಶರಣರ ನುಡಿಗಡಣ' ಒಂದು ಆಶಾಕಿರಣ.

*'ಹೆದರದಿರು ಮನವೆ, ಬೆದರದಿರು ತನುವೆ,*
*ನಿಜವನರಿತು ನಿಶ್ಚಿಂತವಾಗಿರು*
*ಫಲವಾದ ಮರನಕಲ್ಲಲಿ ಇಡುವರೊಂದು ಕೋಟಿ,*
*ಎಲವದ ಮರನ ಇಡುವರೊಬ್ಬರ ಕಾಣೆ,*
*ಭಕ್ತಿಯುಳ್ಳವರ ಬೈವರೊಂದು ಕೋಟಿ,*
*ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ,*
*ಚನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ನುಡಿಯೆ*
*ಎನಗೆ ಗತಿ-ಮತಿ ಸೋಪಾನ'*

ಅಂತೆಯೇ ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ-ನಿಂದೆಗಳು ಬಂದರೆ ಅಳುಕದೆ ಸಮಾಧಾನಿಯಾಗಿರಬೇಕು ಎಂದು ಅಕ್ಕನವರು ಸಂತೈಸುತ್ತಾರೆ.

ಶರಣ ಉರಿಲಿಂಗ ಪೆದ್ದಿ ಅನುಭವದ ಹಿನ್ನಲೆಯಲ್ಲಿಯೂ ಅನುಭಾವದ ಬೆಳಕಿನಲ್ಲಿ 'ಲಿಂಗಪೂಜೆಯ' ಫಲವನ್ನು ರಸವತ್ತಾಗಿ ನಿರೂಪಿಸಿದ್ದಾನೆ.

*'ದೇಹವೆಂಬ ಮಹಾಮನೆಯಲ್ಲಿ ಮಹಾಲಿಂಗವೆಂಬರಸು*
*ಮನವೆಂಬ ಪೀಠದ ಮೇಲೆ ಮೂರ್ತಿಗೊಂಡು*
*ಅಂತಃಕರಣಗಳೆಂಬ ಪರಿಚಾರಕರ ಕೈಯಿಂದ*
*ಪಂಚೇಂದ್ರಿಯಂಗಳೆಂಬ ಪರಿವಾಣದಲ್ಲಿ*
*ಶಬ್ದ ಸ್ಪರ್ಶ ರೂಪು ರಸ ಗಂಧಗಳೆಂಬ ಪದಾರ್ಥಗಳನು ಎಡೆ*
*ಮಾಡಿಸಿಕೊಂಡು ಸವಿಯುತ್ತಿರಲು*
*ಆನಂದವೇ ಮಹಾಪ್ರಸಾದವಾಗಿ*
*ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ ಸದಾಸನ್ನಿಹಿತ ಕಾಣಿರೋ'*

ಎಂದು ಅಂತರಂಗ ಪೂಜೆಯ ವೈಭವವನ್ನು ಒಂದು ವಚನದಲ್ಲಿ ಹೇಳಿದ್ದಾನೆ. ಅಂತೆಯೇ ಲಿಂಗಾಂಗ ಸಾಮರಸ್ಯದ ನಿಲವು ಆತನ ಅನೇಕ ವಚನಗಳಲ್ಲಿ ಬಹು ಪರಿಣಾಮಕಾರಿಯಾಗಿ ಮೂಡಿಬಂದಿದೆ.

ವರ್ಣಮಯ ಮನಸ್ಸಿನ ವಿವಿಧ ಮುಖಗಳ ಪರಿಚಯ ಮಾಡಿಕೊಂಡ ಮೇಲೆ, 'ಮನಃಶಾಂತಿ' ಸಾಧಿಸಿ ಪಡೆಯಲು ವ್ಯಕ್ತಿಯು ಕೆಲವೊಂದು ಉಪಾಯಗಳನ್ನು

ಅನುಸರಿಸಿದರೆ ಹೆಚ್ಚು ಅನುಕೂಲ ಪರಿಸರ ನಿರ್ಮಾಣ ವಾಗುವುದೆಂಬ ಬಲವಾದ ನಂಬಿಗೆ ಇದೆ. 'ಉಪಾಯಗಳ ಬುಟ್ಟಿ'ಯಿಂದ ಕೆಲವೊಂದು ಉಪಾಯಗಳು ಪ್ರಚಲಿತ ಇರುವವುಗಳನ್ನು ನೋಡೋಣ.

೧) ಆರೋಗ್ಯ: ಒಳ್ಳೆ ಆರೋಗ್ಯ ಆಧ್ಯಾತ್ಮಿಕ ಹಾಗೂ ಲೌಕಿಕ ಸಾಧನೆಗೆ ಹೆಚ್ಚು ಉಪಯುಕ್ತ. ನಿಸರ್ಗದ ತತ್ವಗಳನ್ನು ಅನುಸರಿಸಬೇಕು-ದಿನಾಲು ೨ ಊಟ, ೮ ಗ್ಲಾಸ್ ನೀರು ಕುಡಿಯಿರಿ, ವಾರಕ್ಕೆ ಒಂದು ದಿವಸ ಉಪವಾಸ. ಅರ್ಧ ತಾಸು ಶರೀರ ಶ್ರಮ. ದಿವಸದಲ್ಲಿ ೧ ತಾಸು ಧ್ಯಾನ ಮತ್ತು ಮುದ್ರೆಯಲ್ಲಿ ಆರೋಗ್ಯ, ಪಂಚಮಹಾಭೂತಗಳ ಪರಿಕಲ್ಪನೆ ಪಡೆದರೆ ಒಳಿತು.

೨) ಜೀವನದ ಬಗೆಗೆ ಸರಿಯಾದ ಮನೋವೃತ್ತಿ (Hobbices, Attitudes, Philosophy etc) ಬದುಕುವ ಕಲೆ ಅಳವಡಿಸಿಕೊಳ್ಳಿರಿ. ಓದುವುದು, ಸಾಹಿತ್ಯ ಮತ್ತು ಆಧ್ಯಾತ್ಮದ ಗ್ರಂಥಗಳಲ್ಲಿ ಆಸಕ್ತಿ, ಸೈಕೋ ಸೊಮ್ಯಾಟಿಕ್ ಡಿಸೀಜಗಳ ಬಗೆಗೆ ಜ್ಞಾನ ಪಡೆಯಿರಿ. ಆಯುರ್ವೇದದ ನಿಯಮಗಳು, ಇಷ್ಟದೇವತಾ ಪ್ರಾರ್ಥನೆ, ಮಂತ್ರಶಕ್ತಿಯ ಅರಿವು ಮುಂತಾದ ಸರಳ ಉಪಾಯಗಳ ಅರಿವು ಸಹಕಾರಿ.

೩) ಯೋಗ, ಯೋಗಾಸನಗಳು, ಧ್ಯಾನ, ಸತ್ಕರ್ಮ ಇತ್ಯಾದಿಗಳು. ಸತ್ಸಂಗ, ವಿವಿಧ ಯೋಗಗಳ ಅರಿವು, ಪ್ರಾಣಾಯಾಮ ಇತ್ಯಾದಿ. ಸ್ವಾಮಿ ಸತ್ಯಾನಂದ ಸರಸ್ವತಿಗಳು 'ಯೋಗ ಇಂದಿನ ಅವಶ್ಯಕತೆ ಹಾಗೂ ಭವಿಷ್ಯದ ಸಂಸ್ಕೃತಿಯ ದಿಕ್ಸೂಚಿ' ಎಂದು ಹೇಳುತ್ತಾರೆ. ಸ್ವಾಮಿ ನಿರಂಜನಾನಂದ ಸರಸ್ವತಿಗಳು 'ನಿಜವಾದ ಯೋಗವು ಯಾವುದೇ ಪರಿಸ್ಥಿತಿಯಲ್ಲಿ ಧನಾತ್ಮಕವಾಗಿ ಚಿಂತನೆ ಮಾಡುವಂತೆ ಪ್ರೇರಣೆ ನೀಡಬೇಕೆಂದು ಹೇಳುತ್ತಾರೆ.

೪) 'ಧ್ಯಾನ'-ಸಕಲ ಸಮಸ್ಯೆಗೆ ಸಾಂತ್ವನ. ಸುಖ, ಸಂತೋಷ ಮನುಷ್ಯನ ಗುರಿ. ಕಾಡುತ್ತಿರುವ ಸಮಸ್ಯೆ, ಅತೃಪ್ತಿ, ಗೊಂದಲ ಗಳಿಗೆ ಬಲಿ, ಯೋಚನೆ-ಮುಖ್ಯ. ಧ್ಯಾನವೆಂದರೆ ಕಣ್ಣು ಮುಚ್ಚಿ ಕುಳಿತು ಮನಸ್ಸು ಬೇರೆಡೆ ಹೋಗದಂತೆ ಬಿಗಿ ಹಿಡಿಯುವ ಸಾಧನೆ. ಮನಸ್ಸನ್ನು ಕೇಂದ್ರೀಕರಿಸಬೇಕಾದರೆ 'ಓಂ' ಶಬ್ದವನ್ನು ಮನಸ್ಸಿನಲ್ಲಿ ತಂದುಕೊಂಡು ಜಪಿಸಿ, ಆಗ ಏಕಾಗ್ರತೆ ಸಾಧ್ಯವಾಗುತ್ತದೆ. ಧ್ಯಾನ ಮಾಡುವುದ ರಿಂದ ಮನಶುದ್ಧಿ, ಏಕಾಗ್ರತೆ, ಪರ್ಯಾಲೋಚನೆ, ವ್ಯಕ್ತಿತ್ವ ತತ್ಪರತೆ, ಮೋಕ್ಷ ಪ್ರಾಪ್ತವಾಗುತ್ತದೆ. ಧ್ಯಾನ ಸಿದ್ಧತೆಗ ಶ್ರದ್ಧೆ, ದೃಢತೆ, ಆತ್ಮವಿಶ್ವಾಸ, ಧೈರ್ಯ, ನಿಷ್ಕಳಂಕ ಮನಸ್ಸಿದ್ದರೆ ಫಲಪ್ರಾಪ್ತಿ, ಏಕಾಗ್ರತೆಯ ಧ್ಯಾನ-ಸಮಾಧಿ, ಮನುಷ್ಯನನ್ನು ಪರಿಪೂರ್ಣ ಮಾಡುತ್ತದೆ. ಪತಂಜಲಿಯೋಗ, ರಾಜಯೋಗ, ಶಿವಯೋಗ ಇತ್ಯಾದಿಗಳ ಅರಿವು ಮುಖ್ಯ.

೫) ಜ್ಯೋತಿಷ್ಯಶಾಸ್ತ್ರ – ಚಂದ್ರಗ್ರಹದ ವಿಷಯಕ್ಕೆ ಮುತ್ತು ಧಾರಣೆ ಮಾಡಿದರೆ ಮನಃಶಾಂತಿ ಸಿಗುತ್ತದೆ ಎಂದು ಸೂಚಿಸಿದೆ.

೬) ಮನಃಶಾಂತಿ, ರೋಗನಿವಾರಣೆಗೆ, ಮಂತ್ರಪಠಣ ಮಾಡಿರಿ. 'ಓಂ ಕ್ಷೀರಾರ್ಣಜಾಯ ವಿದ್ಮಹೇ। ಲಕ್ಷ್ಮಾನುಜಾಯ ಧೀಮಹೀ। ತನ್ನೋ ಚಂದ್ರಃ ಪ್ರಚೋದಯಾತ್ ॥

೭) ಮನೋರೋಗ ನಾಶಕ್ಕೆ 'ಮಂತ್ರ' ಪಠಿಸಿರಿ.
'ಓಂ' ಕ್ಷೀರಪುತ್ರಾಯ ವಿದ್ಮಹೇ। ಅಮೃತತತ್ವಾಯಧೀಮಹೀ ತನ್ನಃಶ್ಚಂದ್ರಃ ಪ್ರಚೋದಯಾತ್ ॥

೮) ಅ) ರುದ್ರಾಕ್ಷಿಮಾಲೆ-ಬಿ.ಪಿ. ಬ್ರೇನಹ್ಯಾಮರೇಜ್‌ನಿಂದ ಪಾರಾಗಲು, ಮಾನಸಿಕ ಶಾಂತಿ, ಒತ್ತಡ ನಿವಾರಣೆ ಸಾಧ್ಯ.
ಆ) ಸ್ಫಟಿಕ ಮಾಲೆ-ಮಾನಸಿಕ ಶಾಂತಿ, ಏಕಾಗ್ರತೆ, ಧೈರ್ಯ.
ಇ) ನವರತ್ನಮಾಲೆ ಹಾಗೂ ರೋಜ್‌ಕ್ವಾರ್ಝ

೯) ಅ) ಸಂಗೀತ –Anxiety ಚಿಕಿತ್ಸೆ-ನಟಭೈರವ, ಸೋಹನಿ, Depression ಕೋಮಲ ರಿಶಬ್ದ ಅಸಾವರಿ; ಶಂಕರಾಭರಣ.

೧೦)ಔಷಧ-ಅ) ಅಶ್ವಗಂಧಾರಿಷ್ಟ- ನರಗಳಿಗೆ ಹಾಗೂ ಜನರಲ್ ಶಕ್ತಿವರ್ಧಕ.
ಆ) (೧/೨ ಚ. ಅಜವಾನ್+೧ ಚಮಚ ಬೆಲ್ಲ+೧ ಚಮಚ ದಾಲ್ಚಿನ್ನಿ. ೧ ಚಮಚ ಕಸಕಸಿ+೮ ಕರಿದ್ರಾಕ್ಷಿ) ಕೂಡಿಸಿ ೧ ಚಮಚ ದಿವಸಕ್ಕೆ ೩ ಸಲ ತೆಗೆದುಕೊಳ್ಳಿರಿ.

೧೧) ರಾಘವೇಂದ್ರ ಮಹಾಸ್ವಾಮಿಗಳ 'ಸಂತೋಷಪ್ರದ ಸ್ತೋತ್ರ' ಪಠಿಸಿರಿ ಮತ್ತು ಹನುಮದೇವರ 'ವಾಯುಸ್ತುತಿ' ಪಠಿಸಿರಿ.

೧೨) 'ಮನಃಶಾಂತಿ'-ಅಥರ್ವವೇದ-(ಸುಮನಸ್ಕತೆಗೆ-ಸಹೃದಯತೆಗೆ)
'ಸಹೃದಯಂ ಸಾಂಮನಸ್ಯಮವಿದ್ವೇಷಂ ಕೃಣೋಮಿ ।
ಅನ್ಯೋ ಅನ್ಯಮಭಿಹರ್ಯತ ವತ್ಸಂ ಜಾತಮಿವಾಘ್ನ್ಯಾ॥೧॥
ಅನುವ್ರತಃ ಪಿತುಃ ಪುತ್ರೋ ಮಾತ್ರಭವತನಿ ಸಂಮನಾಃ ।
ಜಾಯಾ ಪತ್ಯೇಮಧುಮತೀಂ ವಾಚಂ ವದತು ಶಾಂತಿವಾಮ್॥೨॥'





# ನಗರ ಜೀವನದ ಯಾಂತ್ರಿಕತೆ

-ಟಿ.ಆರ್. ಮಹಾದೇವಯ್ಯ *

ಪ್ರಕೃತ್ರಿಯ ನಡುವೆ ಸಹಜ ಜೀವನ ನಡೆಸುವ ಗ್ರಾಮೀಣ ಜನ ಧನ್ಯರು. ಅವರಿಗೆ ಕೆಲವು ಆಧುನಿಕ ಜೀವನದ ಸವಲತ್ತುಗಳು ಇಲ್ಲದೆ ಇರಬಹುದು. ಆದರೆ ಶುದ್ಧವಾದ ಗಾಳಿ, ನೀರು; ಅಕೃತಕ ಪ್ರೀತಿವಿಶ್ವಾಸಗಳ ಕೊರತೆಯಿರದು. ಇಂಥ ಸ್ವಾಭಾವಿಕ ಪರಿಸರದಲ್ಲಿ ಸೂರ್ಯನೂ ಸಹ ಸಾವಕಾಶದ ನಡಿಗೆಯಲ್ಲಿ ಸಾಗುವಂತೆ ಕಾಣಿಸುತ್ತದೆ! ಜನರೂ ಸಹ ತಮ್ಮ ದೈನಂದಿನ ಕೆಲಸಗಳಲ್ಲಿ ತೊಡಗುತ್ತಾರೆ. ಗಡಿಬಿಡಿಯಿಲ್ಲ, ಗದ್ದಲವಿಲ್ಲ. ನೆರೆಹೊರೆಯ ವರೊಡನೆ ಮಾತುಕತೆಯಲ್ಲಿ ತೊಡಗುವುದು, ಅಕ್ಕಪಕ್ಕ ದವರಿಗೆ ಅಗತ್ಯ ಬಂದಲ್ಲಿ ನೆರವಾಗುವುದು, ಊರೊಟ್ಟಿನ ಕಾರ್ಯಗಳಿದ್ದಲ್ಲಿ ಭಾಗಿಯಾಗುವುದು. ಸಂತೆಗೆ ಅಥವಾ ಜಾತ್ರೆಗೆ ಹೋಗುವುದಿದ್ದಲ್ಲಿ ಒಟ್ಟಿಗೆ ಹೋಗುವುದು. ತಮ್ಮ ಮನೆಗಳಲ್ಲಿ ವಿಶೇಷ ಕಾರ್ಯಗಳಿದ್ದರೂ ಅಕ್ಕಪಕ್ಕದವರನ್ನು ಬಂಧುಗಳನ್ನು ಆಹ್ವಾನಿಸಿ ತಿಂದುಂಡು ಸುಖಪಡುವುದು. ಕಷ್ಟ ಬಂದಾಗ ನೆರೆಹೊರೆಯವರೊಡನೆ ಹೇಳಿ ದುಗುಡ ವನ್ನು ಹಗುರಗೊಳಿಸಿಕೊಳ್ಳುವುದು. ಹೀಗೆ ಹಳ್ಳಿಗಳಲ್ಲಿ ಸೌಹಾರ್ದಯುತ ವಾತಾವರಣವಿರುತ್ತದೆ.

ಹಾಗೆಂದು ಗ್ರಾಮೀಣರ ಬದುಕಿನಲ್ಲಿ ದ್ವೇಷಾಸೂಯೆ, ವ್ಯಾಜ್ಯ-ಬಡಿದಾಟಗಳು ಇಲ್ಲವೇ ಇಲ್ಲವೆಂದಲ್ಲ. ಇತ್ತೀಚಿನ ದಿನಗಳಲ್ಲಿ ಹಳ್ಳಿಗಳಲ್ಲಿನ ಪ್ರಶಾಂತ ವಾತಾವರಣ ಕದಡಿದೆ. ರಾಜಕೀಯದ ವಿಷಗಾಳಿ ಅವರ ನೆಮ್ಮದಿ ಬದುಕನ್ನು ಕೆದಕಿ ರಾಡಿ ಮಾಡುತ್ತಿದೆ. ಮುಗ್ಧ ಹಳ್ಳಿಗರನ್ನು ರಾಜಕಾರಣಿ ಗಳು ದುರ್ಬಳಕೆ ಮಾಡಿಕೊಳ್ಳುತ್ತಿದ್ದಾರೆ. ಓಟು ಗಳಿಸುವ ಆಸೆಯಿಂದ ಜನರಲ್ಲಿ ಜಾತಿ, ಮತ, ವರ್ಣ ವರ್ಣಗಳ ಭೇದ ತಂದು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ. 'ಎಲ್ಲರೂ ಒಂದು' ಎಂಬ ಭಾವದಲ್ಲಿ ಬದುಕುತ್ತಿದ್ದ ಹಾಲು ಮನಸ್ಸಿನ ಜನರ ಎದೆಯಲ್ಲಿ ಹಾಲಾಹಲ ತುಂಬುತ್ತಿದ್ದಾರೆ. ಇಷ್ಟಾದರೂ ಕೂಡ ನಗರ ಜೀವನಕ್ಕೆ ಹೋಲಿಸಿದರೆ ಮಾನವ ಸಂಬಂಧಗಳು ಅಲ್ಲಲ್ಲಿ ಉಳಿದಿವೆ. ಅವಕಾಶ ಒದಗಿದಾಗ ಹೊಮ್ಮಿ ಬದುಕನ್ನು ಸಹನೀಯವೆನಿಸುತ್ತದೆ.

ಆದರೆ ನಗರ ಜೀವನ ಎಷ್ಟು ಯಾಂತ್ರಿಕ ಹಾಗೂ ಶುಷ್ಕವಾಗುತ್ತಿದೆಯೆಂದರೆ ಒಬ್ಬೊಬ್ಬರೂ ಒಂದೊಂದು ದ್ವೀಪ ವಾಗುತ್ತಿದ್ದಾರೆ. ನೆರೆಹೊರೆಯವರೊಡನೆಯೂ ಸಂಪರ್ಕ ಕುಗ್ಗುತ್ತಿದೆ. ಗಂಡಹೆಂಡತಿ ಇಬ್ಬರೂ ಕೆಲಸಕ್ಕೆ ಹೋಗುತ್ತಾರೆ. ಮಕ್ಕಳು ಬೇಬಿಕೇರ್‌ನಲ್ಲಿ ಬೆಳೆಯುತ್ತವೆ. ಮನೆಗಳಲ್ಲಿ ವಯಸ್ಸಾದ ತಂದೆ-ತಾಯಿಯರೂ ಇರುವುದಿಲ್ಲ. ಅವರಿಗಾಗಿಯೇ ಇವೆಯಲ್ಲ ವೃದ್ಧಾಶ್ರಮಗಳು! ಅಲ್ಲಿ ಅವರು ಮಕ್ಕಳ, ಮೊಮ್ಮಕ್ಕಳ ಪ್ರೀತಿಯಿಂದ ವಂಚಿತರಾಗಿ ದಿನಗಳನ್ನು ಎಣಿಸುತ್ತಾ ಆಶ್ರಮವಾಸಿಗಳಾಗಿರುತ್ತಾರೆ.

ಅಕ್ಕಪಕ್ಕ ಏನಾಗುತ್ತಿದೆ? ನಾಡಿನಲ್ಲಿ ಏನು ನಡೆದಿದೆ ಎಂಬುದು ತಿಳಿದುಕೊಳ್ಳಲೂ ಪುರುಸೊತ್ತಿಲ್ಲ. ನೇರವಾಗಿ ತನಗೆ ಸಂಬಂಧಪಟ್ಟ ವಿಷಯವಾದರೆ ಸ್ವಲ್ಪ ಆಸಕ್ತಿ, ಅಷ್ಟೆ. ದುಡಿಮೆ, ದುಡಿಮೆ! ಅಥವಾ ದುಡಿಯುವಂತೆ ನಟನೆ! ಮನೆಗೆ ಬಂದು ಊಟ, ಟಿ.ವಿ. ನೋಡೋದು, ನಿದ್ರೆ, ಬೆಳಿಗ್ಗೆ ಎದ್ದರೆ ಮತ್ತೆ ಓಟ. ಗಡಿಯಾರದ ಮುಳ್ಳಿನಂತೆ ಯಾಂತ್ರಿಕ ಚಲನೆ, ಮಾನವೀಯತೆಗೆ ಕೆಲಸವೇ ಇಲ್ಲ.

ಜೀವನವೆಂಬುದು ಜಟಕಾಬಂಡಿ. ವ್ಯಕ್ತಿ ಅದಕ್ಕೆ ಕಟ್ಟಿದ ಕುದುರೆ. ವಿಧಿಯೇ ಸವಾರ. ಆತ ಕುದುರೆಗೆ ಪ್ರಿಯವಾದ ಹಸಿರುಹುಲ್ಲಿನ ಕಂತೆಯನ್ನು ಅದರ ಮುಂದೆ ಹಿಡಿದಿದ್ದಾನೆ. ಹುಲ್ಲಿನ ವಾಸನೆ ಅದರ ಮೂಗಿಗೆ ಬಡಿಯುತ್ತಿದೆ; ಬಾಯಲ್ಲಿ ನೀರೂರುತ್ತಿದೆ. ಅದನ್ನು ಎಟಕಿಸಿಕೊಳ್ಳಲು ಮುಂದೆ ಮುಂದೆ ಸಾಗುತ್ತದೆ. ಆದರೆ ಹುಲ್ಲಿನ ಕಂತೆ ನಿಲುಕುತ್ತಿಲ್ಲ. ಹಾಗೆಂದು ಸುಮ್ಮನಿರಲಾದೀತೆ? ಮರಳಿ ಮರಳಿ ಯತ್ನ ಮಾಡಬೇಕಲ್ಲವೆ ಮುಂದೆ ಮುಂದೆ ಓಡುತ್ತದೆ. ಹಾಗೆ ಈ ಬದುಕು!

ಬದುಕಿನ ಸ್ವಾರಸ್ಯವನ್ನು ಕಂಡುಕೊಂಡು ಸುಖ ಪಡಬೇಕು ಎಂಬುದಕ್ಕಿಂತ ಹಣ ಗಳಿಸಬೇಕು. ಹೆಚ್ಚು ಹೆಚ್ಚು ಕೂಡಿಡಬೇಕು. ಆಮೇಲೆ ಸುಖವಾಗಿರಬೇಕು ಎಂಬ ಆಸೆ. 'ಬೆರಣಿಯ ನಾರಿಸಲಲ್ಲದೆ ಅಟ್ಟುಣ್ಣ ತೆರಹಿಲ್ಲಯ್ಯಾ' ಎಂಬ ಬಸವಣ್ಣನವರ ಮಾತೊಂದಿದೆ. ಅದು ಇಂಥವರನ್ನೇ ಕುರಿತದ್ದು. ಬೆರಣಿ ಒಂದು ಉರುವಲು. ಅಡಿಗೆ ಮಾಡಲು ಒಂದು ಸಾಧನ. ಅದನ್ನು ಸಂಗ್ರಹಿಸಿ ಇಟ್ಟುಕೊಳ್ಳುವುದು ಒಳ್ಳೆಯದು. ಆದರೆ ಅಡಿಗೆ ಮಾಡಿ ಉಣ್ಣದೆ ಬೆರಣಿಯನ್ನು ಬರೀ ಸಂಗ್ರಹಿಸುವುದರಲ್ಲೇ ಕಾಲ ಕಳೆದರೆ ಏನು ಪ್ರಯೋಜನ? ನಗರವೆಂಬ ಬೃಹತ್ ಯಂತ್ರದ ಒಂದು ಬಿಡಿಭಾಗವಾಗಿ ಜೀವಿಸುತ್ತಿರುವ ಮನುಷ್ಯ ಇರುವ ಆಯುಷ್ಯವನ್ನೆಲ್ಲಾ ಹಣ ಗಳಿಕೆಯಲ್ಲೇ ಕಳೆದರೆ ಜೀವನ ಸ್ವಾರಸ್ಯವನ್ನು ಅನುಭವಿಸುವುದು ಯಾವಾಗ? ಹಣದಿಂದ ಭೋಗವಸ್ತುಗಳನ್ನು ಕೊಳ್ಳಬಹುದು; ಐಷಾರಾಮ ಜೀವನ ರೂಢಿಸಿಕೊಳ್ಳಬಹುದು. ಆದರೆ ಆತ್ಮತೃಪ್ತಿಯ ಸರಕು ಬಜಾರಿ ನಲ್ಲಿ ದೊರಕುವುದಿಲ್ಲ. ಅದು ಪ್ರೀತಿವಿಶ್ವಾಸದಿಂದ, ಸೌಹಾರ್ದ ದಿಂದ ದೊರಕುತ್ತದೆ. ಅದರಿಂದ ಬೆಲೆ ಕಟ್ಟಲಾಗದ ಮಾನವೀಯ ಮೌಲ್ಯಗಳು ಒದಗುತ್ತವೆ. ಆಧುನಿಕ ಜೀವನ ನಮಗೆ ಏನೆಲ್ಲಾ ಅನುಕೂಲ ಒದಗಿಸಿದೆ. ಕೊರತೆಯಾಗಿರು ವುದೇ ಪ್ರೀತಿ ವಾತ್ಸಲ್ಯಕ್ಕೆ, ಮಾನವೀಯ ಅಂತಃಕರಣಕ್ಕೆ. ಬದುಕು ಸಹನೀಯವೆನಿಸುವುದು, ಸಾರ್ಥಕವಾಗುವುದು ಅವುಗಳಿಂದಲೇ ಎಂಬುದನ್ನು ನಾವು ಅರಿತು ಬಾಳಬೇಕಾಗಿದೆ. ❖

* ನಂ. 136, ಮೊದಲನೇ ಮುಖ್ಯರಸ್ತೆ, ಮೊದಲನೇ ಫೇಸ್, ನಾಗರಬಾವಿ 2ನೇ ಹಂತ, ಬೆಂಗಳೂರು.







# ಅನುವನರಿತ ಹಿರಿತನದ ಒಂದು ಅವಲೋಕನ

-ಸ.ರಾ. ಸುಳಕೂಡೆ *

ಪೀಠಿಕೆ : ಮನುಷ್ಯ ಜೀವ ಜಗತ್ತಿನ ಪ್ರಮುಖ ಸ್ಥಾನದಲ್ಲಿ ಇದ್ದಾನೆ. ಮನುಷ್ಯ ಎಲ್ಲ ಮನುಷ್ಯರಿಗೆ ಸಮಾನ ಅಂಗ ಮತ್ತು ಅವಕಾಶಗಳನ್ನು ನೀಡಿದೆ. ಒಂದು ಅರ್ಥದಲ್ಲಿ ಇಲ್ಲಿ ಹಿರಿದು-ಕಿರಿದು, ಬಲಿಷ್ಟ-ಬಲಹೀನ, ಕನಿಷ್ಟ-ಧನಿಷ್ಟ- ಎಂಬೆಲ್ಲ ಅನಿಕಿಕೆಗಳಿಗೆ ಯಾವುದೇ ಸ್ಥಿರವಾದ ತಳಪಾಯ ವಿಲ್ಲ. ಇಂದು ಬಲಹೀನನೆಂದು ತುಚ್ಚೀಕರಿಸಲ್ಪಟ್ಟ ಮನುಷ್ಯ ಬೆಳಗಾಗುವಂತೆ ಬಲಿಷ್ಠನೆಂಬ ಹೆಗ್ಗಳಿಕೆಗೆ ಪಾತ್ರನಾಗಲೂ ಬಹುದು. ಜೀವ ಜಗತ್ತಿನ ವಿದ್ಯಮಾನದಲ್ಲಿ ಮನುಷ್ಯನ ಸ್ಥಾನ-ಮಾನಗಳು, ಪ್ರಗತಿ-ಪರಿಣಾಮಗಳು ನಿರಂತರ ಬದಲಾವಣೆಯೊಳಗೆ ಹರವಿಕೊಂಡಿರುತ್ತವೆ. ಇದಲ್ಲದೆ ಪ್ರತಿಯೊಬ್ಬ ಮನುಷ್ಯನು ಉನ್ನತಿ ಹೊಂದಬೇಕು, ಪ್ರತಿಯೊಂದರೊಳಗೆ ತನ್ನ ಛಾಯೆಯು ಮೂಡಿರಬೇಕೆಂಬ ಹಂಬಲ ಹೊತ್ತುಕೊಂಡಿದ್ದಾನೆ. ತನಗೆ ಹಿರಿತನ, ತನ್ನ ಅಣತಿಯೇ ಪರಿಪಾಲನೆ ಮುಂದಿರಬೇಕೆಂಬ ಅಭಿಲಾಷೆ ಬಲವತ್ತರವಾಗಿರುವುದು ಸಹಜವೇ ಆಗಿದೆ. ಪುರಾತನ ಕಾಲದೊಳಗೆ ಸಾಂಘಿಕ ಪ್ರಯತ್ನಕ್ಕೆ ಪ್ರಾಶಸ್ತ್ಯವಿತ್ತು. ಋಷಿಗಳ ಅಣತಿಯೇ ಅಂತಿಮವಾಗಿತ್ತು. ನಂತರ ರಾಜ-ರಾಣಿಯರ ಹಿರಿತನದ ಪಟ್ಟವು ಗಟ್ಟಿಗೊಂಡಿತು. ಇಂದಿನ ಪ್ರಜಾತಾಂತ್ರಿಕ ದಿನಮಾನದಲ್ಲಿ ಹಿರಿತನವು ಅನೇಕ ಹರವುಗಳನ್ನು ಪಡೆದುಕೊಂಡಿದೆ. ಪ್ರತಿ ಕುಟುಂಬವು ಹಿರಿತನದ ಜಿಜ್ಞಾಸೆಗೆ ಒಳಗಾಗಿದೆ. ಹಿರಿತನದ ಗುಣ-ಲಕ್ಷಣವು ಕುಟುಂಬ-ಸಮಾಜಗಳಿಗೆ ಅನುಗುಣವಾಗಿ ರೂಪಿತಗೊಂಡಿವೆ. ಲಿಂಗಾಯತ ಸಮುದಾಯದೊಳಗಿನ 'ಹಿರಿತನ' 'ಮಾನವೀಯ ಸಂಬಂಧಗಳ ಕೊಂಡಿಯಾಗಿದೆ. ಬಸವಾದಿ ಶರಣರು 'ಹಿರಿತನ'ದ ರೂಪುರೇಷೆಗಳನ್ನು ಮಾನವೀಯ ಮೌಲ್ಯಗಳ ಅನ್ವಯ ಅನುಭಾವದಿ ವಿಸ್ತರಿಸಿದ್ದಾರೆ. 'ಹಿರಿತನ'ದ ಹದಗಾರಿಕೆಯ ಕೆಲವೊಂದು ಗುಣಲಕ್ಷಣ ಗಳನ್ನು ವಚನಗಳ ಮೂಲಕ ತಿಳಿದುಕೊಳ್ಳುವ ಪ್ರಯತ್ನ ಇಲ್ಲಿ ಮಾಡಲಾಗಿದೆ.

ವಾಸ್ತವತೆಯ ನೆಲೆಯೊಳಗೆ ವರ್ತಿಸುವುದೇ ಹಿರಿತನ : ಶರಣರು ಮಾನವನ ಬದುಕಿನ ಪರವಾಗಿ ಚಿಂತನೆಗೈದು ಮಾನವೀಯತೆಯ ಉನ್ನತಿ ಸಾಧಿಸುವುದೇ ಹಿರಿತನವೆಂದು ನಂಬಿ ಬಾಳಿದವರು ಪರಲೋಕದ ಭ್ರಾಂತಿ ಬಿಡಿಸಿದ ಶರಣರು ವಾಸ್ತವ ಬದುಕಿಗೆ ಮಾನ್ಯತೆಯನ್ನು ನೀಡಿದರು. ಇದನ್ನೇ ಬಸವಣ್ಣನವರು ಪರಾಮರ್ಶಿಸಿರುವುದು ಹೀಗಿದೆ,

*ಒಬ್ಬ ಕಂಚನೊಬ್ಬ ಕರಿಕನೊಬ್ಬ ಶುದ್ಧ ಧವಳಿತ*
*ನೆಂತಯ್ಯಾ ಲಿಂಗವೇ?*
*ಒಬ್ಬರಿಗೊಬ್ಬರು ಘನವೆಂಬರು; ಅದೆಂತಯ್ಯಾ?*
*ಒಬ್ಬರಿಗೊಬ್ಬರು ಹಿರಿದೆಂಬರು; ಎಂತಯ್ಯಾ ?*
*ಬ್ರಹ್ಮ ಪ್ರಳಯ, ವಿಷ್ಣು ಮರಣ ಉಂಟು*
*ನಮ್ಮ ಕೂಡಲಸಂಗಂಗಿಲ್ಲ!*

ಭ್ರಾಂತಿಯಿಂದ ದೂರಾದಾಗ ಹಿರಿತನ-ಕಿರಿತನ ಗೊಂದಲವು ಬಹುದೂರ ನಿಲ್ಲುತ್ತದೆ. ಜಗದ ಬಾಳಿನೊಳಗೆ ಸಕಲರೂ ಘನತರವಾದ ಬದುಕನ್ನು ರೂಢಿಸಿಕೊಳ್ಳುವುದೇ ಹಿರಿತನದ ಕುರುಹು ಆಗಿದೆ. ಆ ದೇವರು ಈ ಅವತಾರ, ಮಹಿಮೆ, ಪವಾಡವೆಂದು ತನ್ನನ್ನು ಕುಬ್ಜರನ್ನಾಗಿ ಚಿತ್ರಿಸಿಕೊಳ್ಳು ವುದೇ ಕೀಳರಿಮೆ ಕನಿಷ್ಠ ಭಾವನೆಯಾಗಿದೆ. ಇದನ್ನು ಮೀರು ವುದೇ ಹಿರಿತನವಾಗಿದೆ.

ಕೆಲವು ವ್ಯವಹಾರಗಳಲ್ಲಿ ನಮಗಾವ ಲಾಭ ಇಲ್ಲದಿದ್ದರೂ ಬೇರೆಯವರ ಲಾಭಕ್ಕಾಗಿ ಕೆಲವು ಕೆಲಸಗಳನ್ನು ಮಾಡಬಲ್ಲ ಮನೋವೃತ್ತಿಯನ್ನು ನಾವೆಲ್ಲ ಬೆಳೆಸಿಕೊಳ್ಳಬೇಕು. ನಮಗಾವ ಲಾಭವಿಲ್ಲದಿದ್ದರೂ ಬೇರೆಯವರಿಗೆ ನಷ್ಟವನ್ನುಂಟು ಮಾಡುವುದು ಹೇಗೆ ಅತಿ ನೀಚತನವೋ, ಅದೇ ರೀತಿ ನಮಗಾವ ಲಾಭವಿಲ್ಲದಿದ್ದರೂ ಬೇರೆಯವರಿಗೆ ಲಾಭ ದೊರಕಿಸಿಕೊಡುವುದು ಅತೀ ಉತ್ತಮ, ಅದರಲ್ಲೂ ಲಾಭ ಹೊಂದಿದರೆ ಮತ್ತಷ್ಟೂ ಉತ್ತಮ.

* ೧೩೧೯, ರಾಮತೀರ್ಥನಗರ, ಬೆಳಗಾವಿ -೫೯೮ ೦೧೬.







# ಬಾರಿಸು ಕನ್ನಡ ಡಿಂಡಿಮವ

-ಪ್ರೊ. ಡಿ.ಟಿ. ರಂಗಸ್ವಾಮಿ *

ಇದು ಮಹಾಕವಿ ಕುವೆಂಪುರವರ ಶ್ರೀವಾಣಿ, ಇದು ಅರ್ಥಪೂರ್ಣವೂ, ಧ್ವನಿಪೂರ್ಣವೂ, ವೈಚಾರಿಕವೂ ಸಂದೇಶ ದಾಯಕವೂ ಆಗಿದೆ. ಇದರ ವಿವರಣೆಯೂ ಅನಿವಾರ್ಯ ವಾಗಿದೆ.

ಕನ್ನಡ ಎಂಬುದು ಕೇವಲ ಭಾಷೆಗೆ ಮಾತ್ರ ಸೀಮಿತ ವಲ್ಲ. ಯಾವುದೇ ದೇಶ ಅಥವಾ ರಾಷ್ಟ್ರವೆಂದರೆ ಅಲ್ಲಿಯ ನಿರ್ದಿಷ್ಟ ಭೌಗೋಳಿಕ ಪರಿಮಿತಿಯೊಳಗೆ ಬರುವ ಭೂಮಿ, ಅರಣ್ಯ, ಸಾಹಿತ್ಯ, ಶಿಲ್ಪ, ಸಂಗೀತ, ಕೈಗಾರಿಕೆ, ವಿಜ್ಞಾನ ಮೊದಲಾದ ಸಂಪತ್ತುಗಳೆಲ್ಲ ಸೇರಿದ ಮಹಾಮೊತ್ತ ಎಂದರ್ಥ. ಇವೆಲ್ಲಗಳ ಅಭಿವೃದ್ಧಿ, ಕೊರತೆ ಹಾಗೂ ಸ್ಥಿತಿ ಗತಿಗಳ ಚಿಂತನೆ ನಡೆಸುವುದೇ ಆಯಾ ರಾಜ್ಯ/ರಾಷ್ಟ್ರದ ಅರಿವಿನ ಅರ್ಥವಾಗಿದೆ. ಇದು ಸದಾ ಹಾಗೂ ನಿರಂತರ ಕ್ರಿಯೆಯಾಗಿ ನಡೆಯಬೇಕು, ಪ್ರಪಂಚದಲ್ಲಿ ನೂರಾರು ಭಾಷೆಗಳುಂಟು. ಭಾಷಾ ಶಾಸ್ತ್ರಜ್ಞರ ಪ್ರಕಾರ ೩.೨೦೦ ಭಾಷೆಗಳಿವೆ. ಒಂದೊಂದು ರಾಜ್ಯ/ರಾಷ್ಟ್ರದಲ್ಲಿಯೂ ಹತ್ತಾರು ಭಾಷೆಗಳು ಪ್ರಚಲಿತವಾಗಿ ಬಳಕೆಯಲ್ಲಿರುತ್ತವೆ.

ಜನರು ತಮ್ಮ ಅಭಿಪ್ರಾಯಗಳನ್ನು ಇತರರಿಗೂ ಇತರರ ಅಭಿಪ್ರಾಯಗಳನ್ನು ತಾವೂ ತಿಳಿಯಲು ಭಾಷೆಯು ಅಭಿವ್ಯಕ್ತಿಯ ಮಾಧ್ಯಮವಾಗಿದೆ. ಭಾವಸ್ಪಂದನ, ವಿಚಾರದ ಜಾಗೃತಿ, ಅಭಿಪ್ರಾಯ ಕೌಶಲ್ಯ, ಸೃಜನಾತ್ಮಕತೆ, ಗ್ರಂಥರಚನೆ ಇತ್ಯಾದಿಗಳಿಗೂ ಭಾಷೆಯು ನೆರವು ನೀಡುತ್ತದೆ. ಭಾಷೆಯ ನೆರವಿಲ್ಲದಿದ್ದಲ್ಲಿ ಜನತೆಯು ಕತ್ತಲಲ್ಲಿರಬೇಕಾಗಿದ್ದಿತು. ಸಂಕ್ಷೇಪವಾಗಿ ಹೇಳಬೇಕೆಂದರೆ ಭಾಷೆಯು ಬೆಳಕಿನ ಪ್ರಪಂಚವಾಗಿದೆ. ಯಾವುದೇ ಹಸಿರುಕ್ರಾಂತಿ, ಕ್ಷೀರಕ್ರಾಂತಿ, ಉದ್ಯೋಗಕ್ರಾಂತಿ, ಸಾಮಾಜಿಕ-ಧಾರ್ಮಿಕ-ಸಾಂಸ್ಕೃತಿಕ ಕ್ರಾಂತಿಗಳಿಗೂ ಭಾಷೆಯು ನೆರವು ಸ್ಫೂರ್ತಿ ನೀಡುತ್ತದೆ.

ಪ್ರಪಂಚದಲ್ಲಿ ಪ್ರತಿಯೊಂದು ದೇಶ/ರಾಷ್ಟ್ರದವರಿಗೆ ಇದು ನಮ್ಮ ದೇಶ/ನನ್ನ ರಾಷ್ಟ್ರ ಎಂಬ ಸ್ವಾಭಿಮಾನ ವಿರಬೇಕು ಕೆಲವರಿಗೆ ಇದು ಆಹಾರ-ವಿಹಾರಕ್ಕಿಂತಲೂ ಅಧಿಕ ಸಂವೇದನೆ, ಕ್ರಿಯಾಶೀಲತೆ, ಭಾವಸ್ಫುರಣ, ಸಾಂಸ್ಕೃತಿಕ ಶಕ್ತಿವಿಕಾಸಗಳಿಗೂ ಕಾರಣವಾಗಿರುತ್ತದೆ. Is there a man whose soul is dead this is my own native land ಇದು ನನ್ನ ಜನ್ಮಭೂಮಿ ಎಂದು ಹೇಳದ ವ್ಯಕ್ತಿ ಯಾರಾದರೂ ಉಂಟೆ ಎಂದು ಆಂಗ್ಲ ಕವಿ ತಿಳಿಸುತ್ತಾನೆ.

ನನ್ನದು ನಾಡು ನನ್ನದು ನಾಡು॥ ಎನ್ನದ ಮಾನವನೆದೆ ಸುಡುಗಾಡು॥ ಎಂದು ಮಹಾಕವಿ ಕುವೆಂಪುರವರೂ ಎಚ್ಚರಿಸುತ್ತಾರೆ. ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ ಎಂದು ವಾಲ್ಮೀಕಿ ಮಹರ್ಷಿಯು ರಾಮಾಯಣ ದಲ್ಲಿ ಹೇಳುತ್ತಾರೆ. ತಾಯಿ ಮತ್ತು ಜನ್ಮಭೂಮಿ-ಇವು ಸ್ವರ್ಗೀಯವಾದ ಸುಖ ಸಂತೋಷ ಕೊಡುವ ಸತ್‌ಸಂಗತಿ ಗಳೂ ಆಗಿವೆ.

ಆದ್ದರಿಂದ ಕನ್ನಡವೆಂಬುದು ಕನ್ನಡಾಂಬೆಯೂ ಆಗಿದೆ. ಕನ್ನಡನಾಡಿನ ಸಂಸ್ಕೃತಿ, ಸಾಹಿತ್ಯ, ಪರಂಪರೆ, ರಾಜಕಾರಣ, ರಾಜ್ಯಾಡಳಿತ, ಪ್ರಗತಿ ಸಂಗತಿಗಳಿಗೂ ಅನ್ವಯಿಸುತ್ತದೆ. ಅಂತೆಯೇ ನಾವೆಲ್ಲರೂ ಅಪ್ಪಟ ಕನ್ನಡಿಗರೇ ಆಗಿ ಕನ್ನಡದ ಸಂರಕ್ಷಣೆಗೆ, ಪ್ರಗತಿಗೆ ಶ್ರಮಿಸಬೇಕಾಗಿದೆ. ಭಾರತದಲ್ಲಿ ವಾಸಿಸುವರೆಲ್ಲರೂ ಭಾರತೀಯರೂ ಹೌದು! ಇದೊಂದು ಅಖಂಡ ಭಾರತ! ಇದೊಂದು ಮಹಾಕೂಟ! ಸ್ವಾತಂತ್ರ್ಯಾನಂತರ ಇಲ್ಲಿ ಪ್ರಜಾಪ್ರಭುತ್ವವು ನೆಲಸಿದೆ! ಹನ್ನೊಂದು ಪಂಚವಾರ್ಷಿಕ ಯೋಜನೆಗಳ ಮೂಲಕ ರಾಷ್ಟ್ರವು ಪ್ರಗತಿ ಹೊಂದುತ್ತಿದೆ. ವಿಜ್ಞಾನ ತಂತ್ರಜ್ಞಾನ, ಕೈಗಾರಿಕೆಗಳಲ್ಲಿಯೂ ಮುನ್ನಡೆ ಸಾಧಿಸುತ್ತಿದೆ. ಈ ಮಹಾ ಒಕ್ಕೂಟದಲ್ಲಿ ೨೮+೬ ರಾಜ್ಯಗಳಿವೆ. ೧೯ ರಾಷ್ಟ್ರಭಾಷೆ ಗಳಿವೆ. ಕನ್ನಡವೂ ಈ ೧೯ರಲ್ಲಿ ಒಂದಾಗಿದೆ. ಸಂವಿಧಾ ನಾತ್ಮಕವಾಗಿ ಎಲ್ಲಾ ಭಾಷೆಗಳೂ ಸಮಾನ ಸ್ಥಾನಮಾನ

* ನಿವೃತ್ತ ಕನ್ನಡ ಪ್ರಾಧ್ಯಾಪಕರು, ವರಕೆರೆದೇವರಪುರ, ಹೊಳಲ್ಕೆರೆ ತಾ॥ ಚಿತ್ರದುರ್ಗ ಜಿಲ್ಲೆ-577 557.

ಪಡೆದಿವೆ. ಕನ್ನಡ ಭಾಷೆಯೂ ಇಲ್ಲಿ ರಾಷ್ಟ್ರ ಭಾಷೆಯಾಗಿ ಆಡಳಿತ ಭಾಷೆಯಾಗಿ ಜನಮನದ ಭಾಷೆ ಯಾಗಿ ಅಭ್ಯುದಯ ಪರಂಪರೆ ಪಡೆಯುತ್ತಿದೆ. ಭಾರತೀಯರಿಗೆಲ್ಲ ಒಂದೇ ಸಂವಿಧಾನ ಒಂದೇ ರಾಷ್ಟ್ರ ಧ್ವಜ, ಒಂದೇ ರಾಷ್ಟ್ರಗೀತೆಯುಂಟು, ಮಹಾಒಕ್ಕೂಟ ವಾಗಿರುವುದರಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಆಡಳಿತ ವ್ಯವಸ್ಥೆಯಿದೆ. ಈ ಆಡಳಿತವು ಪ್ರಜಾಸತ್ತಾತ್ಮಕವೂ ಪಾರದರ್ಶಕವೂ ಆಗಲು ಸರ್ವರೂ ಪ್ರಾಮಾಣಿಕರಾಗಿ ನಿಸ್ವಾರ್ಥ ಸೇವಾ ಮನೋಭಾವದಿಂದ ನಡೆಯಬೇಕಾಗಿದೆ. ಆದರೆ ಇಲ್ಲಿಯ ಲೋಪ-ದೋಷಗಳೂ ಕುಂದು ಕೊರತೆಗಳೂ ಅಪಾರವಾಗಿವೆ. ಇವುಗಳನ್ನೆಲ್ಲ ತೊಲಗಿಸಿಕೊಂಡು ನಾವೆಲ್ಲರೂ ಸದೃಢ ಬೃಹತ್ ಭಾರತವನ್ನು ಕಟ್ಟಿ ಸಂರಕ್ಷಣೆ ಮಾಡಬೇಕಾಗಿದೆ. ಅಂತೆಯೇ ನಾವೆಲ್ಲರೂ ಭಾರತದ ಮತ್ತು ಕನ್ನಡದ ವೀರಯೋಧರೆ ಆಗಬೇಕಾಗಿದೆ.

ನಾವು ಈ ಪ್ರಪಂಚಕ್ಕೆ ಬಂದಿರುವುದೇ ಬಲಶಾಲಿಗಳಾಗುವುದಕ್ಕಾಗಿ-ಎಂದು ಸ್ವಾಮಿ ವಿವೇಕಾನಂದರು ಹೇಳುತ್ತಾರೆ. ಅದಕ್ಕಾಗಿ ಏಳು ಉದ್ದೇಶ ಗುರಿ ಮುಟ್ಟುವ ತನಕ ನಿಲ್ಲದಿರು-ಎಂದೂ ಎಚ್ಚರಿಸುತ್ತಾರೆ. ಸ್ತ್ರೀಪುರುಷರಿಗೆ ಹೆತ್ತ ತಾಯಿ ಮಾತ್ರವಲ್ಲದೆ ಹೆತ್ತತಾಯಿಗೆ ಸಮಾನವಾಗಿ ಇನ್ನು ನಾಲ್ವರು ಮಾತೆಯರಿದ್ದಾರೆ. ಮಾತೃಭಾಷೆ, ಮಾತೃಭೂಮಿ, ರಾಷ್ಟ್ರಜನನಿ ಮತ್ತು ಭಗವಂತ. ಇವೂ ಅನಿವಾರ್ಯ, ವೈಚಾರಿಕ ಹಾಗೂ ಸಮಯೋಚಿತವಾಗಿವೆ. ಅಂತೆಯೇ ಕನ್ನಡ, ಕನ್ನಡಾಂಬೆ, ಭಾರತಾಂಬೆ ಮತ್ತು ಭಗವಂತ ಇವರಿಗೂ ನಮ್ಮ ಸೇವೆ ನಡೆಸಬೇಕಾಗಿದೆ. ಗೌರವ ಸಲ್ಲಿಸಬೇಕಾಗಿದೆ ತ್ವಮೇವ ಮಾತಾ ಚ ತ್ವಮೇವ ಪಿತಾ। ತ್ವಮೇವ ಬಂಧುಶ್ಚ, ತಾಯಿಯ ಸ್ಥಾನದಲ್ಲಿರುವ ಸತ್ ಸಂಗತಿಗಳ ಪೂರ್ಣ ಅರಿವು ಅಗತ್ಯ.

ಅಮ್ಮ ನೀನು ನಕ್ಕರೆ॥ ನಮ್ಮ ಬಾಳು ಸಕ್ಕರೆ ॥

ಎಂಬುದಂತು ಸತ್ಯಸಂಗತಿಯಾಗಿದೆ! ವಿಚಾರಣೀಯವಾಗಿದೆ. ಯಾವುದೇ ರಾಷ್ಟ್ರಕ್ಕೂ ದೇಶಕ್ಕೂ ಹೊರಶತ್ರುಗಳೂ ಉಂಟು! ಒಳಶತ್ರುಗಳೂ ಉಂಟು! ನೆರೆಹೊರೆಯ ಉಗ್ರಗಾಮಿಗಳೇ ಹೊರಶತ್ರುಗಳು! ಬಡತನ, ಸ್ವಾರ್ಥ, ಅಪ್ರಾಮಾಣಿಕತನ, ಅನಾಚಾರ, ಅಜ್ಞಾನ ಅವೈಜ್ಞಾನಿಕತೆಗಳೇ ನಮ್ಮ ಒಳಶತ್ರುಗಳಾಗಿವೆ. ಈ ಎಲ್ಲ ಶತ್ರುಗಳನ್ನು ನಾವು ಸದೆಬಡಿಯೋಣ. ಕನ್ನಡ ರಾಜರಾಜೇಶ್ವರಿ ಹಾಗೂ ಭಾರತಾಂಬೆಯರು ಸದಾ ಹಸನ್ಮುಖಿಗಳಾಗಿರಲು ನಾವೆಲ್ಲರೂ ಸುರಕ್ಷಿತರೂ, ಸುಸಂಸ್ಕೃತರೂ, ವಿವೇಕಿಗಳೂ ಆಗಬೇಕಾಗಿದೆ. ದೇಶೀಯ ಹಾಗೂ ರಾಷ್ಟ್ರೀಯ ಮನೋಭಾವಗಳು ಸರಿಯಾಗಿ ವಿಕಾಸಗೊಳ್ಳಬೇಕಾಗಿದೆ. ಕನ್ನಡವು ಇಂದು ಗ್ರಾಮಾಂತರ ಪ್ರದೇಶದಲ್ಲಿ ಮಾತ್ರ ಸಂಪೂರ್ಣವಾಗಿ ಉಳಿದಿದೆ. ಬೆಳೆಯುತ್ತಿದೆ. ನಗರ ಹಾಗೂ ಮಹಾನಗರಗಳಲ್ಲಿ ಕನ್ನಡದ ಸ್ಥಿತಿ ಶೋಚನೀಯವಾಗಿದೆ. ವಿವರಣೆಯೇನೆಂದರೆ ಶಿಕ್ಷಣ ಮಾಧ್ಯಮದಲ್ಲಿ ಕನ್ನಡ ಬಳಕೆಯಾಗುತ್ತಿಲ್ಲ ಮತ್ತು ಪ್ರಥಮ ಭಾಷೆ, ದ್ವಿತೀಯ ಭಾಷೆ, ತೃತೀಯ ಭಾಷೆ ಎಂದು ಆದೇಶ ಜಾರಿಯಾದಂದಿನಿಂದ ಕನ್ನಡ ನಲುಗುತ್ತಿದೆ. ಅಲ್ಲದೆ ಹಿಂದಿಭಾಷೆಗೆ ದೊರೆಯುತ್ತಿರುವಷ್ಟು ಪ್ರೋತ್ಸಾಹ ಕನ್ನಡಕ್ಕೆ ದೊರೆಯುತ್ತಿಲ್ಲ! ನವೋದಯ, ಮೊರಾರ್ಜಿ ಶಾಲೆಗಳಲ್ಲಿ ಸಿ.ಬಿ.ಎಸ್.ಸಿ. ಪಠ್ಯದಲ್ಲಿ ಕನ್ನಡದ ಗಾಳಿ ಕನ್ನಡದ ಕಂಪು ಇಲ್ಲವೇ ಇಲ್ಲ. ಸ್ವಾತಂತ್ರ್ಯ ಬಂದು ೬೩ ವರ್ಷಗಳು ಸಂದಿದ್ದರೂ ಶಾಸ್ತ್ರೀಯ ಭಾಷೆಯ ಸ್ಥಾನ ಇದುವರೆಗೆ ದೊರೆಯದಿದ್ದು, ಹಿಂದಿನ ವರ್ಷ ೨೦೦೮ರಲ್ಲಿ ದೊರೆತಿದೆ. ನಾವೆಲ್ಲರೂ ಜಾಗೃತರಾಗಬೇಕಾಗಿದೆ. ಕನ್ನಡ ಎಲ್ಲರ ಹೃದಯ ವೇದಿಕೆಯಾಗಲಿ, ನಾವೆಲ್ಲರೂ ಸಹಭಾಗಿಗಳಾಗಿ ಕರ್ತವ್ಯಶೀಲರೂ ಆಗೋಣ. 'ಕನ್ನಡ ಇಂದು ಕೂಲ್ ಆಗುವುದು ಬೇಡ, ಗರಮ್ ಆಗಬೇಕಾಗಿದೆ. ಕನ್ನಡದ ಸಮಗ್ರ ಅಭಿವೃದ್ಧಿಗಾಗಿ ಕನ್ನಡ ನಾಡಿನಲ್ಲಿರುವವರೆಲ್ಲರೂ ಕನ್ನಡದ ಬಳಕೆ ಮಾಡಲಿ, ಬೆಳಸಲಿ, ಇದುವೆ ಕನ್ನಡ ಡಿಂಡಿಮವನ್ನು ಬಾರಿಸುವ ಬಗೆ. ❖

ಮನುಷ್ಯನ ವಿಫಲತೆಗೆ ರಾಬರ್ಟ್‌ಕೋಬೆ ಎಂಬಾತ ಮೂರು ಕಾರಣಗಳನ್ನು ಹೇಳುತ್ತಾನೆ. ೧. ತಾನು ಮಾಡಬೇಕಾಗಿರುವ ಕೆಲಸಗಳ ಪ್ರಾಮುಖ್ಯತೆಯನ್ನು ಒಂದು ಕ್ರಮದಲ್ಲಿ ಸರಿಯಾಗಿ ನಿಶ್ಚಯಿಸಿಕೊಳ್ಳದೇ ಹೋವುದು. ೨. ಮಾಡಬೇಕಾಗಿರುವ ಕೆಲಸಗಳನ್ನು ಆ ಕ್ರಮದಲ್ಲೇ ಸರಿಯಾಗಿ ಮಾಡದಿರುವುದು. ೩. ಅದೇ ಕ್ರಮದಲ್ಲಿ ಮಾಡುವ ಕೆಲಸಗಳ ಬಗ್ಗೆ ಶಿಸ್ತು, ಛಲ ಇಲ್ಲದೆ ಹೋಗುವುದು.







# ಶಿಕ್ಷಣ ಮತ್ತು ನೈತಿಕ ಶಿಕ್ಷಣ

ಕವಿತಾಕೃಷ್ಣ *

ಮಾನವನ ಸರ್ವಾಂಗೀಣ ಪ್ರಗತಿಯನ್ನು ಬಯಸುವುದೇ ರಾಷ್ಟ್ರೀಯ ಶಿಕ್ಷಣದ ಉದ್ದೇಶ. ವೈಜ್ಞಾನಿಕ ಮನೋಭಾವ ಬೆಳೆಯಬೇಕು. ರಾಷ್ಟ್ರದ ಉತ್ಪಾದನೆ ಹೆಚ್ಚಬೇಕು. ಪರಿಸರ ಸಂರಕ್ಷಣೆಯಾಗಬೇಕು. ರಾಷ್ಟ್ರೀಯ ಭಾವೈಕ್ಯತೆ ಇಮ್ಮಡಿಸಬೇಕು. ಜನತೆಯಲ್ಲಿ ಸಾರ್ವಕಾಲಿಕ ಸತ್ಯವೆನಿಸುವ ಮೌಲ್ಯಗಳನ್ನು ಬೆಳೆಸಬೇಕು. ಹಾಗೆಯೇ ಮೂಢನಂಬಿಕೆ, ಕಂದಾಚಾರ, ಅನಾಗರಿಕತೆ, ಅಜ್ಞಾನ, ಅನ್ಯಾಯಗಳು ಅಳಿಯಬೇಕು. ಈ ಕಾರ್ಯಗಳನ್ನು ನೈತಿಕ ಶಿಕ್ಷಣ ಮಾಡಬಲ್ಲುದು. ವಿದ್ಯಾರ್ಥಿಗಳಿಗೆ ಆಂತರಿಕ ಶಕ್ತಿ ಒದಗಿಸಬಲ್ಲುದು. ಶಿಕ್ಷಣ ಹಾಗೂ ನೈತಿಕ ಶಿಕ್ಷಣ ಮಾನವನ ಬದುಕಿನ ಬಂಡಿಗೆ ಎರಡು ಚಕ್ರಗಳಾಗಬೇಕು.

ನಮ್ಮ ಇಂದಿನ ಪಠ್ಯವಸ್ತುವಿನಲ್ಲಿ ನೈತಿಕ ಶಿಕ್ಷಣವನ್ನು ತುಂಬುವ ಪಾಠಗಳು ಇರಬೇಕಾದುದು ಅತ್ಯಗತ್ಯವಾಗಿದೆ.

**ಶಿಕ್ಷಕನ ಪಾತ್ರ:**

ಶಿಕ್ಷಣ ಕ್ಷೇತ್ರದಲ್ಲಿ ಶಿಕ್ಷಕ ಓರ್ವ 'ಮಾರ್ಗದರ್ಶಿ'ಯಾಗಿದ್ದರೂ ಆತನ ಪಾತ್ರ ತುಂಬಾ ಮಹತ್ವದಿಂದ ಕೂಡಿದೆ. ವಿದ್ಯಾರ್ಥಿಯ ಕಲಿಕೆಯಲ್ಲಿ ಅವನ ಪಾತ್ರ ತುಂಬಾ ಪ್ರಾಮುಖ್ಯವಾದುದು. ಶಾಲೆಯೆಂಬುದು ದೇಗುಲವೆನಿಸಬೇಕಾದರೆ ಶಿಕ್ಷಕನ ಶ್ರಮ ಊಹಿಸಲಾರದಷ್ಟಿರುವುದು. ಅದಾಗ್ಯೂ ತಜ್ಞರು ಕೊಟ್ಟ 'ಪಠ್ಯವಿಷಯ'ವನ್ನು ಮಾತ್ರ ಬೋಧಿಸಬೇಕು. ಪಠ್ಯವಿಷಯ ಸಮರ್ಪಕವಾಗಿದ್ದರೆ ಮಾತ್ರ ಶಿಕ್ಷಕನ ಶ್ರಮ ಸಾರ್ಥಕವಾಗುವುದು.

ಇಂದು ಶಿಕ್ಷಕರ-ವಿದ್ಯಾರ್ಥಿಗಳ ಬಾಂಧವ್ಯದ ಕೊಂಡಿ ಕಳಚಿಹೋಗಿರುವುದನ್ನು ಅಗತ್ಯವಾಗಿ ಗಮನಿಸಬೇಕು. ಕಾಫಿ ಹೊಡೆಯಲು ಅವಕಾಶ ನೀಡದ ಗುರುವನ್ನು ಪರೀಕ್ಷಾಕೇಂದ್ರದಲ್ಲೇ ಥಳಿಸಿರುವುದುಂಟು. ಶಿಕ್ಷಕರ ಎದುರು ಬೀಡಿ ಸಿಗರೇಟು ಸೇದುವ ವಿದ್ಯಾರ್ಥಿಗಳು ಧಾರಾಳವಾಗಿ ಕಂಡು ಬರುತ್ತಾರೆ. ಶಾಲೆಗೆ ಕುಡಿದು ಬರುವವರೂ ಉಂಟು ಮತ್ತು ಬರಿಸುವ ಮಾತ್ರೆಗಳ ದಾಸರಾದ ವಿದ್ಯಾರ್ಥಿಗಳನ್ನೂ ಸಹ ಇಂದು ಕಾಣಬಹುದಾಗಿದೆ. ಅವರ ನಡೆ-ನುಡಿ, ಉಡುಗೆ-ತೊಡುಗೆ, ರೀತಿ-ನೀತಿಗಳೆಲ್ಲಾ ಬದಲಾಗಿ ಹೋಗಿವೆ. ಮುಷ್ಕರ ಎಂದರೆ ಅವರಿಗೆ ಮೋಜಿನ ಸಂಗತಿಯಾಗಿದೆ. ಶಾಲೆಯು ಅಶಾಂತಿಯ ಬೀಡಾಗುತ್ತಿದೆ. ಇದಕ್ಕೆ ನೈತಿಕತೆಯ ಅಭಾವವೇ ಕಾರಣ. ನೀತಿ ಇಲ್ಲದ ಶಿಕ್ಷಣದಿಂದ ಲಾಭಕ್ಕಿನ್ನ ನಷ್ಟವೇ ಅಧಿಕ. ಇಂತಹ ಶಿಕ್ಷಣದಿಂದ ಮನೆ-ನೆರೆಹೊರೆ-ಸಮಾಜದ ಜನಜೀವನವೇ ಅಸ್ತವ್ಯಸ್ತವಾಗಿದೆ. ಅನೈತಿಕತೆ ತಾಂಡವವಾಡುತ್ತಿದೆ. ಹೀಗಿರುವಾಗ ವಿದ್ಯಾರ್ಥಿಯನ್ನು ತಿದ್ದುವವರಾರು? ತಿದ್ದಿದರೆ ಶಾಲೆಯೊಂದರಲ್ಲೇ ಮಾತ್ರ ಸಾಧ್ಯ. ನೈತಿಕ ಶಿಕ್ಷಣ ನೀಡುವಲ್ಲಿ ಶಿಕ್ಷಕ ಪ್ರಧಾನ ಪಾತ್ರವನ್ನು ವಹಿಸಬೇಕಾಗಿದೆ.

ಇಂದು ಶಾಲೆಗಳಲ್ಲಿ ನಡೆಯುವ ಬೋಧನಾ ವಿಧಾನವೂ ಸಹ ಒಂದು ರೀತಿಯಲ್ಲಿ ಅಸಮರ್ಪಕ ಎನಿಸುವಂತಿದೆ. ಬೆಲ್ಲು ಬೆಲ್ಲಿಗೂ ಬೇರೆ ಬೇರೆ ಶಿಕ್ಷಕರು ಬರುತ್ತಾರೆ. ಕನ್ನಡ-ಇಂಗ್ಲೀಷ್-ಹಿಂದಿ-ಗಣಿತ-ವಿಜ್ಞಾನ-ಸಮಾಜ ಇತ್ಯಾದಿ ವಿಷಯಗಳನ್ನು ಮಾತ್ರ ಬೋಧಿಸಿ ಹೋಗುತ್ತಾರೆ. ಭಾಷಾ ಶಿಕ್ಷಕ ಭಾಷಾಪಾಠ, ಉಳಿದವರು ಶಾಸ್ತ್ರ ಪಾಠಗಳನ್ನು ಒತ್ತಿ ಹೇಳಿ ನಿರ್ಗಮಿಸುತ್ತಾರೆ. ಆದರೆ ನೀತಿಯ ಬಗ್ಗೆ ಯಾರೂ ಹೇಳರು. ಅದಕ್ಕೆ ಕಾರಣ ಇಷ್ಟೇ ಕೊಟ್ಟ ಅವಧಿಗಳಲ್ಲಿ ಇಟ್ಟಿರುವ ಪಠ್ಯ ವಿಷಯವನ್ನು ಬೋಧಿಸಲು ಅವರು ಶ್ರಮವಹಿಸುತ್ತಾರೆ. ಪಠ್ಯ ವಿಷಯ ಹೆಚ್ಚಾಗಿದೆ, ವೇಳೆ ಸಾಲದು ಎಂಬ ಅತೃಪ್ತಿಯೂ ಇದೆ. ಹೀಗಿರುವಾಗ ತಮ್ಮ ತಮ್ಮ ವಿಷಯ ಪೂರ್ಣಗೊಳಿಸಲು ಒಂದು ರೀತಿ ಪೈಪೋಟಿ ನಡೆಸುತ್ತಿದ್ದಾರೆಂದರೆ ಉತ್ಪ್ರೇಕ್ಷೆಯಾಗದು. ಅವರವರ ವಿಷಯಗಳೇ ಅವರಿಗೆ ಅಧಿಕ ಹೊರೆಯಾಗುವಂತೆ 'ಸಿಲಬಸ್' ಇರುವ ಕಾರಣ ನೈತಿಕ ಶಿಕ್ಷಣ ಅನಾಥವಾಗಿದೆ.

* ಚಂದ್ರಮೌಳೇಶ್ವರ ಬಡಾವಣೆ, ಕ್ಯಾತ್ಸಂದ್ರ, ತುಮಕೂರು-೫೭೨ ೧೦೪.

ಈ ಧಾವಂತ ಶಿಕ್ಷಣದಿಂದ ಹಾನಿಯೇ ಅಧಿಕ ಎಂದು ಎಲ್ಲರೂ ಮನಗಂಡಿದ್ದೇವೆ. ಈಗ ರಾಷ್ಟ್ರೀಯ ಶಿಕ್ಷಣವು ನೈತಿಕ ಶಿಕ್ಷಣಕ್ಕೂ ಮಹತ್ವ ನೀಡಿರುವುದು ಗಮನಾರ್ಹ ಸಂಗತಿ.

ವಿದ್ಯಾರ್ಥಿಯನ್ನು ಒಂದು ಬೆಲೂನ್‌ಗೆ ಹೋಲಿಸಬಹುದು. ಶಾಲೆಯಲ್ಲಿ ಪ್ರತಿಯೋರ್ವ ಶಿಕ್ಷಕರು ಬಂದು, ಪ್ರತಿ ಅವಧಿಯಲ್ಲಿ ತಮ್ಮ ವಿಷಯವೆಂಬ ಗಾಳಿ ತುಂಬಲು ಯತ್ನಿಸುವರು. ಎಲ್ಲರೂ ಊದಿ ಊದಿ ಗಾತ್ರ ಹೆಚ್ಚುವುದು. ಒತ್ತಡ ಅಧಿಕವಾಗಿ ಕಡೆಗೊಮ್ಮೆ ಪೀಪಿಯು ಬಡಾರನೆ ಒಡೆದು ಹೋಗುವುದು. ಪಾಠ ಮಾಡುವುದು 'ಯಾಂತ್ರಿಕ ಕ್ರಿಯೆ'ಯಾಗುತ್ತಿದೆ, ಮನಶಾಸ್ತ್ರದ ಹಿನ್ನಲೆ ಗತಿಗೆಟ್ಟು ಹೋಗಿದೆ. ವಿದ್ಯಾರ್ಥಿಗೆ ದೈಹಿಕ, ಮಾನಸಿಕ ಶಕ್ತಿಗಳನ್ನು ಜೊತೆಜೊತೆಯಲ್ಲೇ ನಡೆಸಬೇಕಾಗಿರುವುದರ ಅಗತ್ಯತೆಯನ್ನು ನಾವು ಬೇಗ ಅರಿವು ಮಾಡಿಕೊಳ್ಳಬೇಕಾಗಿದೆ. ಕಾನ್ವೆಂಟಿನ ಪುಸ್ತಕದ ಹೊರೆ ಕತ್ತೆಯ ಏರನ್ನು ನೆನಪಿಗೆ ತರುವಂತಾಗಿದೆ, ಇದಕ್ಕೆ ಬೇಗೆ ಕಡಿವಾಣ ಹಾಕಬೇಕಾದುದು ಅನಿವಾರ್ಯವಾಗಿದೆ.

ನೈತಿಕ ಶಿಕ್ಷಣ ಬೋಧನೆ ಕೇವಲ ಒಂದು ವರ್ಗದ ಶಿಕ್ಷಕರ ಕಾರ್ಯವಲ್ಲ; ಅದು ಎಲ್ಲಾ ಶಿಕ್ಷಕರ ಪರಮಪವಿತ್ರ ಕರ್ತವ್ಯವಾಗಿದೆ. ಸೀಮಿತ ಅವಧಿಯಲ್ಲಿ ಉಳಿದ ಪಠ್ಯ ವಿಷಯಗಳೊಡನೆ ನೀತಿಶಿಕ್ಷಣ ಬೋಧನೆ ಸಾಗಬೇಕು. ನೀತಿ ಕೇಳಿದರಷ್ಟೇ ಸಾಕಾಗದು; ಅದು ಆಚರಣೆಗೆ ಬರುವಂತಾಗಬೇಕು. ವಿದ್ಯಾರ್ಥಿ ತಾನಾಗಿಯೆ ಬದುಕಿನಲ್ಲಿ ಅಳವಡಿಸಿಕೊಳ್ಳುವಂತೆ ಮಾಡುವುದು ಉತ್ತಮ ಶಿಕ್ಷಕನ ಲಕ್ಷಣವಾಗಿದೆ.

'ನಾನು ಹೇಳಿದಂತೆ ಮಾಡು, ಆದರೆ ನಾನು ಮಾಡಿದಂತೆ ಮಾಡಬೇಡ' ಎಂಬ ಪಂಥದ ಶಿಕ್ಷಕನಿಂದ ಉಪಕಾರಕ್ಕಿನ್ನ ಅಪಕಾರವೇ ಹೆಚ್ಚು. ಅನುಕರಣಶೀಲನಾದ ವಿದ್ಯಾರ್ಥಿ ಗುರುವನ್ನು ತುಂಬಾ ಅನುಕರಿಸುತ್ತಾನೆ. ಆದುದರಿಂದ ಶಿಕ್ಷಕ ಪ್ರತಿಭಾವಂತನಾದಂತೆ, ಸೃಜನಶೀಲನಾದಂತೆ, ನೀತಿವಂತನೂ ಸಹ ಆಗಿರಲೇಬೇಕು. ಮಕ್ಕಳ ಚಾರಿತ್ರ್ಯ ನಿರ್ಮಾಪಕನೆನಿಸುವ ಶಿಕ್ಷಕ ಆದರ್ಶವ್ಯಕ್ತಿಯಾಗಿರಬೇಕು.

ಶಿಕ್ಷಕರಲ್ಲಿ ಹಲವರು ಮಕ್ಕಳಿಗೆ ನೀಡುವ ಭಯಂಕರವಾದ ಶಿಕ್ಷೆಯನ್ನು ನೋಡಿದರೆ ಇದೇನು ಶಿಕ್ಷಣ ಶಾಲೆಯೇ ಅಥವಾ ಕಟುಕರ ಶಾಲೆಯೋ ಎಂಬ ಭಾವನೆ ಮೂಡಿಸುವುದು. ಅಮಾನವೀಯತೆಯಿಂದ ನೀಡುವ ಶಿಕ್ಷೆಗೆ ನಾವು ಮೊದಲು ತಿಲಾಂಜಲಿ ನೀಡಬೇಕು, ಕ್ಷಮೆಗಿನ್ನ ಅಮೂಲ್ಯ ಮೌಲ್ಯವುಳ್ಳದ್ದು ಇನ್ನಾವುದೂ ಇಲ್ಲ. ಶಿಕ್ಷಕ ಕ್ಷಮಾಗುಣಿಯಾಗಿ ವಿದ್ಯಾರ್ಥಿಯಲ್ಲಿನ ಕಳೆಯನ್ನು ಕಿತ್ತು ಹಸನು ಮಾಡಬೇಕು.

'ನೀತಿ ಶಿಕ್ಷಣ ಬೋಧನೆ'

'ಆಡದಲೆ ಮಾಡುವವನು ರೂಢಿಯೊಳಗೆ ಉತ್ತಮನು' ಎಂದು ಕವಿ ಸರ್ವಜ್ಞನು ಮಾರ್ಗದರ್ಶನ ಸೂತ್ರ ಹಾಕಿಕೊಟ್ಟಿದ್ದಾನೆ. ನೀತಿಯ ಬಗ್ಗೆ ಬರಿಯ ಭಾಷಣ ಮಾಡಿ ಬೀಗುವುದಕ್ಕಿನ್ನ ಅದು ಆಚರಣೆಯಲ್ಲಿರಬೇಕೆಂಬುದೇ ಇದರ ಆಶಯವಾಗಿದೆ.

ಅ) ಬದುಕಿಗೆ ಅತ್ಯಗತ್ಯವೆನಿಸುವ ನೀತಿಮೌಲ್ಯಗಳನ್ನೊಳಗೊಂಡ ಪಾಠಗಳನ್ನು ಪಠ್ಯಪುಸ್ತಕದಲ್ಲಿ ಸೇರಿಸಬೇಕು.

ಆ) ನೀತಿಗಾಗಿಯೆ ಪಾಠ ರಚಿಸಿದ್ದಾರೆ ಎಂಬ ಭಾವನೆ ಮಗುವಿಗೆ ಎಲ್ಲೂ ಬರಬಾರದು. ಅಂತ್ಯದಲ್ಲಿ ಉದ್ದೇಶವೂ ಈಡೇರ ಬೇಕು. ನೀತಿಯನ್ನು ಆತನೇ ತಾನಾಗಿ ಬದುಕಿನಲ್ಲಿ ಅಳವಡಿಸಿ ಕೊಳ್ಳುವಂತಾಗಬೇಕು.

ಇ) ಓದಲು ನೀಡುವ ಗ್ರಂಥಭಂಡಾರದ ಪುಸ್ತಕಗಳು ನೀತಿಯುಕ್ತವಾಗಿರಬೇಕು, ವೈಚಾರಿಕತೆಗೂ ಮಹತ್ವವಿರಬೇಕು.

ಈ) ಪ್ರತಿವಾರಕ್ಕೊಮ್ಮೆ ನೀತಿಶಿಕ್ಷಣ ಪ್ರತಿಬಿಂಬಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಬೇಕು.

ಉ) ನಾಟಕ, ಪದ್ಯ, ಏಕಪಾತ್ರ, ಪ್ರಬಂಧ, ಉಪನ್ಯಾಸ, ನೃತ್ಯ ಪ್ರಾಕಾರಗಳ ಮುಖಾಂತರ ನೀಡುವುದು ಪರಿಣಾಮಕಾರಿ.

ಊ) ಪತ್ರಿಕೆ, ಬಾನುಲಿ, ದೂರದರ್ಶನಗಳು ಪ್ರಭಾವಿ ಮಾಧ್ಯಮವಾಗಿವೆ. ಇವುಗಳ ಮುಖಾಂತರ ನೀತಿ ಸಾಹಿತ್ಯ ಪ್ರಸಾರಗೊಳ್ಳಬೇಕು.

ಋ) ಶಾಲೆ ಹಾಗೂ ಅದರ ಸುತ್ತಮುತ್ತ ಶುಚಿಯಾಗಿಡುವ ಕಡೆ ಅಗತ್ಯ ಗಮನ ಹರಿಸಬೇಕು.

ೠ) ಶಾಲಾ ಕೈತೋಟ, ಸಾಮಾಜಿಕ ಅರಣ್ಯಗಳ ಸಂಬಂಧ ಕಲ್ಪಿಸಬೇಕು.





ಎ) ಇಂದಿನ ಪ್ರಚಲಿತ ಸಮಸ್ಯೆಗಳತ್ತ ಅವರ ಗಮನವನ್ನು ಅಗತ್ಯವಾಗಿ ಸೆಳೆಯಬೇಕು. ಉದಾ: ಜಲ–ವಾಯು–ಶಬ್ದ ಮಾಲಿನ್ಯ. ವರದಕ್ಷಿಣೆ, ಜನಸಂಖ್ಯಾ ಸ್ಫೋಟ ಮುಂತಾದುವು.

ಏ) ಶಾಲೆ–ಶಾಲೆಗಳೊಡನೆ ಕ್ರೀಡೆ–ಕಲೆ–ಸಾಂಸ್ಕೃತಿಕ ವಿಷಯಗಳಿಂದ ಸಂಬಂಧ ಗಾಢವಾಗಿಸುವುದು.

ಐ) ಪ್ರಾರ್ಥನಾ ಸಂದರ್ಭದಲ್ಲಿ ದಿನಕ್ಕೊಂದು ದೃಷ್ಟಾಂತ ಕತೆ ಹೇಳುವುದು.

ಒ) ವಿಜೇತರಾದಾಗ ಸ್ಟೀಲ್ ಸಾಮಾನು ನೀಡುವ ಬದಲು ನೀತಿಯುತ ಪುಸ್ತಕಗಳನ್ನು ಬಹುಮಾನವಾಗಿ ನೀಡುವುದು.

ಓ) ಶಾಲೆಯಲ್ಲಿ ಶಿಕ್ಷಕ ನೈತಿಕ ಪರಿಸರ ಬೆಳೆಸಲು ಯತ್ನಿಸಿದಂತೆ ಮಗುವಿನ ನೇರ ಸಂಪರ್ಕವಿರುವ ಮನೆ–ನೆರೆಹೊರೆ–ಸಮಾಜದಲ್ಲಿಯೂ ಸಹ ಸರ್ಕಾರವು ನೈತಿಕತೆ ಬೆಳೆಸಲು ಮುಂದಾಗಬೇಕು.

ಔ) ದಂಡನೆಗಳು ತಪ್ಪಬೇಕು. ಪ್ರತಿಭೆಗಳಿಗೆ ಪುರಸ್ಕಾರಗಳು ಲಭಿಸಬೇಕು.

ಕ) ವಿದ್ಯಾರ್ಥಿಸಂಘದ ಚಟುವಟಿಕೆಗಳಲ್ಲಿ ಎಲ್ಲಾ ಪಾಲು ವಿದ್ಯಾರ್ಥಿಗೇ ಸೇರಬೇಕು. ಶಿಕ್ಷಕ ಹಿನ್ನಲೆಯಾಗಿರಬೇಕು.

ಖ) ಶುಚಿತ್ವ–ಶಿಸ್ತಿಗೆ ಮಹತ್ವ ನೀಡಬೇಕು.

ಗ) ಬೋಧನೆಗಿನ್ನ ಭಾವ ಪ್ರಚೋದಕ ಪದ್ಧತಿ ಮುನ್ನಡೆ ಸಾಧಿಸಬೇಕು.

ಘ) ವಿದ್ಯಾರ್ಥಿಗಳ ಅಂತರಂಗಕ್ಕೆ ಅರಿವಾಗುವಂತೆ 'ಸಮಾಜ ದರ್ಶನ' ಮಾಡಿಸಬೇಕು.

ಙ) ರಕ್ತದಾನ ಶಿಬಿರ, ಉಚಿತ ರೋಗ ಪರೀಕ್ಷಾ ಶಿಬಿರ, ಆಸ್ಪತ್ರೆ, ಪಂಚಾಯಿತಿ, ಅಂಚೆ ಕಛೇರಿ, ಬ್ಯಾಂಕ್ ಮುಂತಾದುವುಗಳ ನೇರ ಪರಿಚಯ ವಿದ್ಯಾರ್ಥಿಗಳಿಗೆ ಆಗಬೇಕು.

ಚ) ಯೋಗ–ಧ್ಯಾನ–ಕ್ರೀಡೆಗಳ ಪರಿಚಯ ಅಗತ್ಯವಾಗಿ, ಹಂತಹಂತವಾಗಿ ಮೂಡಿಸಬೇಕು.

ನೀತಿಶಿಕ್ಷಣ ಬೋಧನೆಯಲ್ಲಿ ಎಲ್ಲಾ ಶಿಕ್ಷಕರೂ ಪ್ರಾಮಾಣಿಕವಾಗಿ ಆಸ್ಥೆ ವಹಿಸಿದರೆ ವಿದ್ಯಾರ್ಥಿಗಳಲ್ಲಿ ನೈತಿಕಮಟ್ಟ ಸುಧಾರಣೆಯಾಗುವುದು. ಸಮಾಜದಲ್ಲಿ ಮದ್ಯಪಾನ, ಧೂಮಪಾನ ಇತ್ಯಾದಿಗಳು ಮುಕ್ತವಾಗಿಯೆ ನಡೆಯುತ್ತಿರುವುದರಿಂದ ಒಳಿತು–ಕೆಡಕುಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ತಿಳಿವು ಹೆಚ್ಚಿಸಬೇಕು. ಇದರಿಂದ ಆತನಲ್ಲಿ ಸ್ವಜ್ಞಾನ ಬೆಳೆದು ದುಶ್ಚಟಗಳನ್ನು ತಾನೇ ದೂರೀಕರಿಸುವನು.

## ಶ್ರೀವಾಣಿ

ಜಗತ್ತು ವೇಗವಾಗಿ ಮುಂದುವರಿಯುತ್ತಿದೆ. ಊಹಿಸಲಾಗದು, ಕಲ್ಪಿಸಿಕೊಳ್ಳಬಾರದು. ನಮ್ಮ ಹಿರಿಯರಿಗೆ ಇಲ್ಲ ವಾಗಿದ್ದ ಸೌಲಭ್ಯ ಇಂದು ನಮ್ಮದಾಗಿದೆ. ಆದರೆ ಶಾಂತಿ ಯಿಲ್ಲವಾಗಿದೆ. ಹಿಂದೆ ಶಾಂತಿಯಿತ್ತು. ಸೌಲಭ್ಯಗಳ ಅಭಾವ ವಿತ್ತು. ಇತಿಹಾಸವನ್ನು ಅವಲೋಕಿಸಿದಾಗ ಸಾವಿರಾರು ರಾಜರು ಆಗಿಹೋಗಿದ್ದಾರೆ. ಅವರನ್ನಿಂದು ಯಾರೂ ಸ್ಮರಿಸುತ್ತಿಲ್ಲ. ಆ ಇನ್ನೊಂದು ವರ್ಗದ ಜನರಿದ್ದಾರೆ. ಲೋಕ ಕ್ಕಾಗಿ ಬದುಕಿದವರು. ಅವರನ್ನಿಂದು ಸ್ಮರಿಸುತ್ತೇವೆ. ಲೋಕ ಪೂಜ್ಯರಾಗಿದ್ದಾರೆ. ಯೇಸು, ಬುದ್ಧ, ಬಸವ, ಗಾಂಧಿ ಅವರು ಸ್ಮರಣಾರ್ಹರಾಗಿದ್ದಾರೆ. ಧರ್ಮ ಕೊಟ್ಟವರು, ಧರ್ಮ ಸಂಕೋಚವಾದದ್ದಲ್ಲ. ವ್ಯಾಪಕ ವಾದದ್ದು. ವಿಜ್ಞಾನ ಮಹಾಶಕ್ತಿದಾಯಿನಿ ನಿಜ. ಹೊಸದಾಗಿ ಏನನ್ನೂ ಕೊಡಲಾಗದು. ಇರುವುದರಿಂದಲೇ ಹೊಸದನ್ನು ಹೊರತೆ ತರುವ ಒಂದು ಮಾಧ್ಯಮ ವಿಜ್ಞಾನ, ಬಾಂಬು ವಿಜ್ಞಾನದ ಕೊಡುಗೆ. ಆದರದು ವಿನಾಶಾತ್ಮಕ. ಬಂದದ್ದೇನು? ಧರ್ಮ ಆದೇಶ ಕೊಡುತ್ತಿದೆ. ಮನುಷ್ಯನಾಗಿ ಬಾಳು ಎಂದು ಹೇಳುತ್ತಿದೆ. ದೇಶ ಸಾಲದ ಭಾರದಿಂದ ಕುಸಿದು ಬೀಳುತ್ತಿದೆ. ಬಸವಣ್ಣನವರು ದೊಡ್ಡ ವಿಚಾರವಾದಿ. ಜೀವನವನ್ನು ಸಮಗ್ರವಾಗಿ ದರ್ಶನ ಮಾಡಿಕೊಂಡವರು. ಜೀವನ ಒಂದು ರತ್ನವಿದ್ದಂತೆ. ಅದನ್ನು ಗೌರವಿಸಬೇಕು; ಅರಿತು ಬಾಳಬೇಕು. ಜೀವಿತಾವಧಿ ಪರಿಮಿತವಾದುದು. ಅಂತ್ಯ ಅನಿರೀಕ್ಷಿತ ವೆಂದು ಗ್ರಹಿಸಿ ಬಾಳಬೇಕು. ಬಸವಣ್ಣನವರ ಪ್ರಪಂಚ ವಿಶ್ವಪ್ರಪಂಚ. ಮರ್ತ್ಯಲೋಕ ಮಾಯೆಯಲ್ಲ; ಕರ್ತಾರನ ಕಮ್ಮಟ. ಜಗತ್ತಿ ಮಹಾಶಕ್ತಿಯಿಂದ ವ್ಯಾಪಕ ವಾಗಿದೆ. ಜೀವನ ಸೌಕರ್ಯಗಳು ಬೇಕು. ಬಸವಣ್ಣನವರು ಮಾಡಿದ ಬಹು ದೊಡ್ಡ ಸಾಮಾಜಿಕ ಪರಿವರ್ತನೆಯೆಂದರೆ ದುಡಿದು ಉಣ್ಣುವ ಸಂಸ್ಕೃತಿಯನ್ನು ನಿರ್ಮಾಣ ಮಾಡಿದ್ದು. ಬಸವ ತತ್ತ್ವಗಳು ಜಗತ್ತಿನ ಸಮಸ್ಯೆಗಳಿಗೆ ಪರಿಹಾರಕೊಡಬಲ್ಲವು. ಅವುಗಳನ್ನು ನಾವು ಆಚರಣೆಗೆ ತರಬೇಕು. ಅದರಿಂದ ನೆಮ್ಮದಿ.

# ನವಲಗುಂದದಲ್ಲಿ ಗುರುವಂದನೆ



'ಪವಿತ್ರ ಕ್ಷೇತ್ರವಾದ ತುಮಕೂರಿನ ಸಿದ್ಧಗಂಗೆಯಿಂದ ಶಿವಸ್ವರೂಪಿಗಳಾಗಿ ಆಗಮಿಸಿದ ಈ ಶತಮಾನದ ಶಿವಯೋಗಿಗಳಾದ ಡಾ॥ ಶ್ರೀ ಶ್ರೀ ಶಿವಕುಮಾರಮಹಾ ಸ್ವಾಮಿಗಳು ವಿರಳರಲ್ಲಿ ವಿರಳರಾಗಿದ್ದಾರೆ. ಶ್ರೀಗಳು ಈ ಭಾಗ್ಯಕ್ಕೆ ಆಗಮಿಸಿ ದರ್ಶನಾಶೀರ್ವಾದ ನೀಡಿದ್ದು ಈ ನಾಡಿನ ಭಕ್ತರ ಭಾಗ್ಯವಾಗಿದೆ. ಅಂತವರ ದರ್ಶನ ಪಡೆದ ಇಲ್ಲಿನ ಭಕ್ತರಿಗೆ ೧೨ ಜ್ಯೋತಿರ್ಲಿಂಗ ನೋಡಿದಷ್ಟು ಪುಣ್ಯ ಬರುತ್ತದೆ' ಎಂದು ಹುಬ್ಬಳ್ಳಿಯ ಮೂರುಸಾವಿರ ಮಠದ ಶ್ರೀ ಗುರುಸಿದ್ಧ ರಾಜಯೋಗೀಂದ್ರಮಹಾಸ್ವಾಮೀಜಿ ಅವರು ಭಕ್ತಿನಮನ ಸಲ್ಲಿಸಿದರು. ಅವರು ಧಾರವಾಡ ಜಿಲ್ಲೆಯ ನವಲಗುಂದದಲ್ಲಿ ನವೆಂಬರ್ ೧೭ರಂದು ಏರ್ಪಡಿಸಿದ್ದ ಗುರುವಂದನಾ ಹಾಗೂ ಪೌರಸನ್ಮಾನ ಕಾರ್ಯಕ್ರಮದ ದಿವ್ಯಸಾನ್ನಿಧ್ಯ ವಹಿಸಿ ಮಾತನಾಡಿದರು.

ಈ ಭಾಗದ ಸಾವಿರಾರು ಬಡ ವಿದ್ಯಾರ್ಥಿಗಳಿಗೆ ಊಟ, ವಸತಿ, ಶಿಕ್ಷಣ ನೀಡುವುದರ ಮೂಲಕ ತ್ರಿವಿಧ ದಾಸೋಹಿಗಳಾಗಿದ್ದರಿಂದ ನಿಜವಾಗಿಯೂ ಇವರು ನಡೆದಾಡುವ ದೇವರೇ ಎಂಬುದನ್ನು ಸಾಕ್ಷೀಕರಿಸಿತು. ಅಂತವರ ದರ್ಶನ ಪಡೆದದ್ದು ಈ ಭಾಗದ ಭಕ್ತರ ಸೌಭಾಗ್ಯ. ಎಲ್ಲ ಅನುಕೂಲವನ್ನು ಒಂದುಗೂಡಿಸಿ ಇಂತಹ ಬೃಹತ್ ಸಮಾರಂಭವನ್ನು ಏರ್ಪಡಿಸಿ ಯಶಸ್ವಿಗೊಳಿಸಿದ ಕೀರ್ತಿ ಗವಿಮಠದ ಶ್ರೀ ಬಸವಲಿಂಗ ಮಹಾಸ್ವಾಮೀಜಿ, ಶಾಸಕ ಶಂಕರ ಪಾಟೀಲ ಮುನೇನಕೊಪ್ಪ ಹಾಗೂ ಹೈಕೋರ್ಟ್ ವಕೀಲರಾದ ಸಿ.ಎಸ್. ಪಾಟೀಲ್ ಅವರಿಗೆ ಸಲ್ಲುತ್ತದೆ ಎಂದು ಹೇಳಿದರು. ಗವಿಮಠದ ಶ್ರೀ ಬಸವಲಿಂಗ ಮಹಾ ಸ್ವಾಮೀಜಿ ಮಾತನಾಡಿ ನಡೆದಾಡುವ ದೇವರು ನವಲಗುಂದಕ್ಕೆ ಬಂದಿರುವುದನ್ನು ಇತಿಹಾಸದ ಪುಟದಲ್ಲಿ ಬರೆದಿಡುವ ದಿನವಾಗಿದೆ. ಸಾವಿರಾರು ಭಕ್ತರು ಬಂದು ದರ್ಶನಾ ಶೀರ್ವಾದ ಪಡೆದಿರುವುದು ಖುಷಿ ತಂದಿದೆ. ಈ ಬೃಹತ್ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದ ಭಕ್ತ ಸಮೂಹಕ್ಕೆ, ಸ್ವಾಗತ ಸಮಿತಿಯ ಅಧ್ಯಕ್ಷರಾದ ಶಾಸಕ ಶಂಕರ ಪಾಟೀಲ ಮುನೇನಕೊಪ್ಪ ಹಾಗೂ ಹೈಕೋರ್ಟ್ ವಕೀಲ ಸಿ.ಎಸ್. ಪಾಟೀಲ ಅವರಿಗೆ ಕೃತಜ್ಞತೆ ಸಲ್ಲಿಸಿದರು. ಸಂಸದ ಪ್ರಹ್ಲಾದ ಜೋಶಿ ಮಾತನಾಡಿ ಡಾ॥ ಶ್ರೀ ಶಿವಕುಮಾರಮಹಾ ಸ್ವಾಮಿಗಳಿಗೆ ಭಾರತರತ್ನ ಪ್ರಶಸ್ತಿ ನೀಡಿದರೆ ಆ ಪ್ರಶಸ್ತಿಗೆ ಒಂದು ಗೌರವ ಬರುತ್ತದೆ ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಪುರಸಭೆ ಹಾಗೂ ತಾಲ್ಲೂಕಿನ ಭಕ್ತರಿಂದ ಶ್ರೀಗಳನ್ನು ಸನ್ಮಾನಿಸಿ ಗುರುವಂದನೆ ಮಾಡಿ, ಪುರಸಭೆಯಿಂದ ರೂ. ೧,೧೧,೧೧೧ ಹಾಗೂ ತಾಲ್ಲೂಕಿನ ಭಕ್ತರ ಪರವಾಗಿ ಸಿದ್ಧಗಂಗಾ ಮಠದಲ್ಲಿನ ದಾಸೋಹಕ್ಕಾಗಿ ಒಂದು ಟ್ರಕ್ ಅಕ್ಕಿ ಮೌಲ್ಯದ ರೂ. ೨,೫೧ ಲಕ್ಷ ಹಣವನ್ನು





ಕಾಣಿಕೆ ಸಲ್ಲಿಸಲಾಯಿತು. ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪ್ರೊ. ಸಿ.ಎಸ್. ಹೊಸಮಠ ಶ್ರೀಗಳಿಗೆ ಸಲ್ಲಿಸಿದ ಬಿನ್ನಹದೋಲೆಯನ್ನು ನಿವೇದನೆ ಮಾಡಿದರು.

ಹುಬ್ಬಳ್ಳಿಯ ರುದ್ರಾಕ್ಷಿಮಠದ ಶ್ರೀ ಬಸವಲಿಂಗಮಹಾ ಸ್ವಾಮೀಜಿ, ಬಾಲೇಹೊಸೂರಿನ ಶ್ರೀ ದಿಂಗಾಲೇಶ್ವರ ಮಹಾ ಸ್ವಾಮೀಜಿ, ಪಂಚಗೃಹ ಹಿರೇಮಠದ ಶ್ರೀ ಸಿದ್ಧೇಶ್ವರ ಶಿವಾ ಚಾರ್ಯರು, ನಾಗಲಿಂಗಸ್ವಾಮಿ ಮಠದ ಶ್ರೀ ವೀರಯ್ಯ ಸ್ವಾಮೀಜಿ, ದಾನಾಪುರದ ಶ್ರೀ ಚಿತ್ರಶೇಖರಮಹಾಸ್ವಾಮೀಜಿ, ಅಕ್ಕಿಆಲೂರಿನ ಶ್ರೀ ಶಿವಬಸವಮಹಾಸ್ವಾಮೀಜಿಯವರು, ಗದಗ ವೀರೇಶ್ವರ ಪುಣ್ಯಾಶ್ರಮದ ವಿಶ್ವನಾಥ ಹಿರೇಮಠ ಸಂಗಡಿಗರು, ಅಡಿವೆಪ್ಪ ಕಮತರ, ಹನುಮಂತಪ್ಪ ಹೂಗಾರ ವಚನ ಗಾಯನ ಸಂಗೀತ ಸೇವೆ ಸಲ್ಲಿಸಿದರು. ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತಿನ ಸದಸ್ಯರು ಸಹಯೋಗ ನೀಡಿದರು. ಎ.ಪಿ.ಎಂ.ಸಿ. ಸದಸ್ಯ ಅಣ್ಣಪ್ಪಾ ಬಾಗಿ ಸ್ವಾಗತಿಸಿದರು. ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಎ.ಬಿ. ಕೊಪ್ಪದ ನಿರೂಪಿಸಿದರು. ಎಂ.ವಿ. ಹೊಳೆಯಣ್ಣವರ ವಂದಿಸಿದರು.

ಸ್ವಾತಂತ್ರ್ಯ ಪೂರ್ವದಲ್ಲೂ ನಾವು ದಾಸರಾಗಿ ಬಡತನ ಅನುಭವಿಸಿದೆವು. ಈಗ ಸ್ವಾತಂತ್ರ್ಯ ಪಡೆದು ೬೪ ವರ್ಷಗಳಾದರೂ ಇನ್ನು ದಾಸರಾಗಿಯೇ ಇರುವುದರಿಂದ ಬಡತನ ಹೆಚ್ಚಾಗಿದೆ. ಮನುಷ್ಯ ಕಾಯಕ ನಿಷ್ಠೆ ಶ್ರದ್ಧೆ, ಭಕ್ತಿಯನ್ನು ಮರೆತು ಸ್ವಾರ್ಥಿಯಾಗುತ್ತಿರುವುದರಿಂದ ದೇಶದಲ್ಲಿ ಭ್ರಷ್ಟಾಚಾರ ತಾಂಡವವಾಡುತ್ತಿರುವುದರಿಂದ ದೇಶದ ಅಭಿವೃದ್ಧಿ ಕುಂಟಿತ ಗೊಂಡಿದೆ ಎಂದು ತುಮಕೂರಿನ ಸಿದ್ಧಗಂಗಾ ಮಠದ ಶ್ರೀ ಶಿವಕುಮಾರಸ್ವಾಮೀಜಿಗಳವರು ಆಶೀರ್ವಚನ ನೀಡಿದರು. ಮಹಾಪುರುಷ ಬಸವಣ್ಣನವರ ತತ್ವ ಸಿದ್ಧಾಂತಗಳು ಸಾರ್ವಕಾಲಿನವಾಗಿದ್ದರಿಂದ ಜೀವನದಲ್ಲಿ ಅಳವಡಿಸಿಕೊಂಡು ಧಾರ್ಮಿಕ, ಸಾಮಾಜಿಕವಾಗಿ ಚಿಂತನೆ ಮಾಡಿ, ಹೋರಾಟದ ಮನೋಭಾವನೆ ಬೆಳೆಸಿಕೊಂಡು ಶ್ರಮಜೀವಿಗಳಾಗಿ ದುಡಿದಾಗ ಮಾತ್ರ ದೇಶ ಅಭಿವೃದ್ಧಿ ಹೊಂದುತ್ತದೆ ಎಂದು ಹೇಳಿದರು.

ಸಾನ್ನಿಧ್ಯ ವಹಿಸಿದ ಬಾಲೇಹೊಸೂರಿನ ಶ್ರೀ ದಿಂಗಾಲೇಶ್ವರ ಮಹಾಸ್ವಾಮೀಜಿ ಮಾತನಾಡಿ ಡಾ॥ ಶ್ರೀ ಶಿವಕುಮಾರಮಹಾಸ್ವಾಮಿಗಳು ಮಾಡಿದ ಸಾಧನೆಗಳನ್ನು ವಿವರಿಸಲು ಶಬ್ಧಗಳೇ ಇಲ್ಲದಂತಾಗಿದೆ. ಭೂಮಿಯನ್ನೇ ಹಾಳೆ ಮಾಡಿಕೊಂಡು, ಮರಗಳನ್ನೇ ಪೆನ್ನು ಮಾಡಿಕೊಂಡು ಹರಿಯುವ ನೀರನ್ನೇ ಮಸಿ ಮಾಡಿ ಸ್ವತಃ ಶಾರದೆಯೇ ಬರೆಯಲು ಕುಳಿತರೆ ಸಾಧನೆಗಳನ್ನು ಬರೆಯಲು ಸಾಧ್ಯ ವಾಗುವುದಿಲ್ಲ. ಅಪರೂಪದ ವಿಶ್ವದ ಏಕೈಕ ಕಾವಿಲೋಕದ ರತ್ನ ಶಿವಕುಮಾರಸ್ವಾಮಿಗಳಾಗಿದ್ದರಿಂದ ಅಂತವರ ವ್ಯಕ್ತಿತ್ವ ಗಳನ್ನು ಅರಿತುಕೊಂಡು ಸಮಾಜದ ಋಣ ತೀರಿಸ ಬೇಕಾಗಿದೆ. ಇಂತಹ ಮಹಾಚೇತನ ನವಲಗುಂದಕ್ಕೆ ಸ್ವತಃ ಆಗಮಿಸಿ ದರ್ಶನ ನೀಡಿದ್ದು ಈ ಭಾಗದ ಜನತೆಯ ಭಾಗ್ಯವಾಗಿದೆ ಎಂದರು.

ನವಲಗುಂದಕ್ಕೆ ಶ್ರೀಗಳು ಆಗಮಿಸುತ್ತಿದ್ದಂತೆಯೇ ಕುಂಭ ಹೊತ್ತ ಸಾವಿರಾರು ಸುಮಂಗಲೆಯರು, ಭಕ್ತರು ಸ್ವಾಗತಿಸಿಕೊಂಡು ಮಧುರ ಸಂಗೀತದ ವಾದ್ಯಮೇಳ ದೊಂದಿಗೆ ಮೆರವಣಿಗೆ ಮೂಲಕ ಶ್ರೀಗಳನ್ನು ಗವಿಮಠಕ್ಕೆ ಕರೆದುಕೊಂಡು ಹೋದರು. ದಾರಿಯುದ್ದಕ್ಕೂ ಎಲ್ಲರ ಮನೆ ಮುಂದೆ ರಂಗೋಲಿ ಹಾಕಿ ಪಟ್ಟಣವನ್ನು ಶೃಂಗರಿಸಿದ್ದರಿಂದ ಇಡೀ ಪಟ್ಟಣದಲ್ಲಿಯೇ ಹಬ್ಬದ ವಾತಾವರಣ ಮೂಡಿತ್ತು. ಸಾವಿರಾರು ಭಕ್ತರು ಏಕಕಾಲಕ್ಕೆ ದರ್ಶನ ಪಡೆಯಲು ಮುಂದಾಗಿದ್ದರಿಂದ ನೂಕುನುಗ್ಗಲು ಉಂಟಾದ ದೃಶ್ಯ ಕಂಡು ಬಂತು. ಗುರುವಂದನಾ ಕಾರ್ಯಕ್ರಮದ ನಂತರ ಶ್ರೀಗಳು ನವಲಗುಂದ ತಾಲ್ಲೂಕಿನ ಅಡ್ನೂರ ಗ್ರಾಮಕ್ಕೆ ತರಳಿ ಪಾಂಡುರಂಗ ದೇವಸ್ಥಾನದ ಕಳಸಾರೋಹಣ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಆಶೀರ್ವಚನ ನೀಡಿದರು. ನ್ಯಾಯವಾದಿ ಸಿ.ಎಸ್. ಪಾಟೀಲ ಅವರ ಮನೆಯಲ್ಲಿ ನೂರಾರು ಭಕ್ತರು ಶ್ರೀಗಳ ಪಾದಪೂಜೆ ಮಾಡಿ ವಂದಿಸಿದರು.

ಇದೇ ಸಂದರ್ಭದಲ್ಲಿ ನವಲಗುಂದ ತಾಲ್ಲೂಕಿ ನಲ್ಲಿಯೇ ಚಿಕ್ಕ ಗ್ರಾಮವಾದ ಅಡ್ನೂರಿಗೆ ತುಮಕೂರಿನ ಸಿದ್ಧಗಂಗ ಮಠದ ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಡಾ॥ ಶ್ರೀ ಶಿವಕುಮಾರಮಹಾಸ್ವಾಮಿಗಳು ಆಗಮಿಸಿ ಕಳಸಾರೋಹಣ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಭಕ್ತರಿಗೆ ದರ್ಶನಾಶೀರ್ವಾದ ನೀಡಿದ್ದು ನಮ್ಮೆಲ್ಲರ ಭಾಗ್ಯ ವಾಗಿದೆ ಎಂದು ಅದೇ ಗ್ರಾಮದವರೇ ಆದ ಹೈಕೋರ್ಟ್ ವಕೀಲ ಸಿ.ಎಸ್. ಪಾಟೀಲ ಅವರು ಭಕ್ತಿನಮನ ಸಲ್ಲಿಸಿದರು.

❖

## ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆ

ದಕ್ಷಿಣ ಭಾರತ್ಯದಲ್ಲಿ ಅತ್ಯಂತ ಶೀಘ್ರವಾಗಿ ನಶಿಸುತ್ತಿರುವ ಆರು ಭಾಷೆಗಳಲ್ಲಿ ಕನ್ನಡ ಕೂಡ ಒಂದಾಗಿರುವುದು ವಿಷಾದನೀಯ. ಸಾವಿರಾರು ವರ್ಷದ ಇತಿಹಾಸವಿರುವ ಶ್ರೀಮಂತ ಭಾಷೆ ಕನ್ನಡ ಇಂದು ಸರ್ಕಾರದ ಧೋರಣೆಗಳು ಸರಿಯಿಲ್ಲದ ಕಾರಣ ನಶಿಸುವ ಮಟ್ಟಕ್ಕೆ ಬಂದಿದೆ. ಇದಕ್ಕೆ ಕನ್ನಡಿಗರು ಬೇರೆ ಭಾಷೆಯನ್ನು ಬಳಸುತ್ತಿರುವುದೂ ಒಂದು ಕಾರಣವಾಗಿದೆ ಎಂದು ಜ್ಞಾನಪೀಠ ಪುರಸ್ಕೃತ ಸಾಹಿತಿ ಡಾ॥ ಚಂದ್ರಶೇಖರ ಕಂಬಾರ ಅಭಿಪ್ರಾಯ ಪಟ್ಟರು. ಅವರು ನವೆಂಬರ್ ೧೭ರಂದು ಶ್ರೀ ಸಿದ್ಧಗಂಗಾಮಠದಲ್ಲಿ ಕನ್ನಡ ರಾಜ್ಯೋತ್ಸವ ಹಾಗೂ ಮಕ್ಕಳ ದಿನಾಚರಣೆ ಅಂಗವಾಗಿ ಏರ್ಪಡಿಸಲಾಗಿದ್ದ ಸಮಾರಂಭದಲ್ಲಿ ಸನಿವಾಸೆ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ಸನ್ಮಾನ ಸ್ವೀಕರಿಸಿ ಮಾತನಾಡುತ್ತಿದ್ದರು.

ಇತ್ತೀಚಿನ ವರ್ಷಗಳಲ್ಲಿ ಕನ್ನಡ ಭಾಷೆಯ ಉಳಿವಿನ ಬಗೆಗೆ ಸರ್ಕಾರಕ್ಕಿರುವ ಇಚ್ಛಾಶಕ್ತಿಯ ಕೊರತೆ ಮತ್ತು ಮನೋಭಾವದ ಕೊರತೆಯಿಂದಾಗಿ ಕನ್ನಡ ಭಾಷೆ ಅಳಿವಿನತ್ತ ಸಾಗುತ್ತಿದೆ ಎಂದು ವಿಷಾದ ವ್ಯಕ್ತಪಡಿಸಿದರು.

ದಕ್ಷಿಣ ಭಾರತದಲ್ಲಿ ಅತ್ಯಂತ ಶೀಘ್ರವಾಗಿ ನಶಿಸುತ್ತಿರುವ ಆರುಭಾಷೆಗಳಲ್ಲಿ ಕನ್ನಡ ಕೂಡ ಒಂದಾಗಿರುವುದು ವಿಷಾದನೀಯ. ಸಾವಿರಾರು ವರ್ಷದ ಇತಿಹಾಸವಿರುವ ಶ್ರೀಮಂತ ಭಾಷೆ ಕನ್ನಡ ಇಂದು ಸರ್ಕಾರದ ಧೋರಣೆಗಳು ಸರಿಯಿಲ್ಲದ ಕಾರಣ ನಶಿಸುವ ಮಟ್ಟಕ್ಕೆ ಬಂದಿದೆ. ಇದಕ್ಕೆ ಕನ್ನಡಿಗರು ಬೇರೆ ಭಾಷೆ ಬಳಸುತ್ತಿರುವುದೂ ಒಂದು ಕಾರಣವಾಗ್ಗಿದೆ ಎಂದು ಅಭಿಪ್ರಾಯಪಟ್ಟರು. ಜರ್ಮನಿಯ ಒಂದು ವಿಶ್ವವಿದ್ಯಾನಿಲಯದ ಅಧ್ಯಯನದ ಪ್ರಕಾರ ಪ್ರಪಂಚದ ೬೨೦೦ ಭಾಷೆಗಳಲ್ಲಿ ಮುಂಬರುವ ೧೦೦೦ ವರ್ಷಗಳಲ್ಲಿ ಉಳಿಯುವ ಭಾಷೆಗಳಲ್ಲಿ ಕನ್ನಡ ಕೂಡ ಒಂದಾಗಿದೆ. ಪಾಶ್ಚಿಮಾತ್ಯರಿಗೆ ಕನ್ನಡದ ಬಗೆಗೆ ಇರುವ ಆಸಕ್ತಿ ಕನ್ನಡಿಗರಿಗೆ ಇಲ್ಲವಾಗಿರುವುದು ದುರಂತ. ವಿಶ್ವದ ೧೨೦ ವಿಶ್ವವಿದ್ಯಾಲಯಗಳಲ್ಲಿ ವಚನದ ಅನುವಾದಗಳು ಪುಸ್ತಕಗಳು ಲಭ್ಯವಿದೆ. ಎಷ್ಟೋ ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯಪುಸ್ತಕಗಳ ತಿರುಳು ಕೂಡ ವಚನಗಳೇ ಆಗಿವೆ. ಕನ್ನಡದ ಬಗ್ಗೆ ಬೇರೆಯವರು ಹೊಂದಿರುವ ಪ್ರೀತಿ ಕನ್ನಡಿಗರು ಅದರಲ್ಲೂ ಬೆಂಗಳೂರಿನ ಜನರಿಗೆ ಇಲ್ಲವಾಗಿದೆ. ಕನ್ನಡ ಕೇವಲ ಅಡಿಗೆ ಮನೆಗೆ ಮಾತ್ರ ಸೀಮಿತವಾಗಿದೆ. ಮಕ್ಕಳಿಗೆ ಸಂಬಂಧಗಳ ಹೆಸರುಗಳಾಗಲಿ, ಗಿಡಮರಗಳ ಹೆಸರುಗಳಾಗಲಿ ಕನ್ನಡದಲ್ಲಿ ಗೊತ್ತಿಲ್ಲದ ವಾತಾವರಣ ಇದೆ. ಈ ಪ್ರವೃತ್ತಿ ಹೀಗೆ ಮುಂದುವರೆದರೆ ಕನ್ನಡ ಉಳಿಸಲು ಸಾಧ್ಯವಿಲ್ಲ ಎಂದು ಇಂಗಿತ ವ್ಯಕ್ತಪಡಿಸಿದರು.

ಕನ್ನಡ ಭಾಷೆಯ ದುಃಸ್ಥಿತಿಗೆ ಕಾರಣರಾದ ಎಲ್ಲರೂ ತಮ್ಮ ಆತ್ಮಾವಲೋಕನ ಮಾಡಿಕೊಳ್ಳಬೇಕಾದ ಕಾಲ ಇದು. ಜಗತ್ತಿನ ೨೭೮ ಭಾಷೆಗಳಿಗೆ ಅನುವಾದವಾದ ಪಂಚತಂತ್ರದ ಕಥೆಗಳು, ಇಡೀ ವಿಶ್ವದಲ್ಲಿಯೇ ಜಾನಪದ ಸೊಗಡನ್ನು ಉಣಬಡಿಸಿದ ನಮ್ಮ ಭಾಷೆಯ ಅಳಿವು–ಉಳಿವು ನಮ್ಮಗಳ ಕೈಯಲ್ಲಿದೆ. ಹೆಚ್ಚು ಹೆಚ್ಚು ಕನ್ನಡ ಪುಸ್ತಕಗಳನ್ನು ಓದುವುದು, ಭಾಷಾಜ್ಞಾನ ಬೆಳೆಸಿಕೊಳ್ಳುವುದು ವಿದ್ಯಾರ್ಥಿಗಳ ಕರ್ತವ್ಯ ಎಂದು ತಿಳಿಸಿದರು. ಚಿಕ್ಕಂದಿನಿಂದಲೂ ಇಂಗ್ಲೀಷ್ ವ್ಯಾಮೋಹಕ್ಕೆ ಮಕ್ಕಳನ್ನು ಸಿಲುಕಿಸಿ ಕೀಳರಿಮೆ ಬೆಳೆಸುವಂತಹ ಶೈಕ್ಷಣಿಕ ವ್ಯವಸ್ಥೆ ಇಂದು ಇದೆ. ಕನ್ನಡ ಶಾಲೆಗಳನ್ನು ಮುಚ್ಚುವ ನಿರ್ಧಾರವನ್ನು ಪುನರಾಲೋಚಿಸುವ ಅಗತ್ಯತೆ ಇದೆ. ಬ್ರಿಟಿಷರು ನಮಗೆ ಕೀಳರಿಮೆಯ ಶಿಕ್ಷಣ ನೀಡಿ ಅದೇ ಭಾಷಾ ದಾಸ್ಯವು ಇಂದೂ ಕೂಡ ಮುಂದುವರಿದಿರುವುದು ಅಸಹನೀಯ ಎಂದರು. ಸಮಾರಂಭದಲ್ಲಿ ಸಾಹಿತಿ ಜರಗನಹಳ್ಳಿ ಶಿವಶಂಕರ್ ಮಾತನಾಡಿದರು. ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರು ಆಶೀರ್ವಚನ ನೀಡರು. ವೇದಿಕೆಯಲ್ಲಿ ಮಠದ ಭಕ್ತರಾದ ಶ್ರೀ ಅನಿಲ್ ಉಪಸ್ಥಿತರಿದ್ದರು. ಮುಖ್ಯ ಶಿಕ್ಷಕರದ ಶ್ರೀ ಜಿ.ಆರ್. ಶಂಕರಪ್ಪನವರು ಸ್ವಾಗತಿಸಿದರು. ಶ್ರೀ ಜಿ. ರುದ್ರೇಶ್‌ರವರು ವಂದನೆ ಸಲ್ಲಿಸಿದರು, ಮುಖ್ಯಶಿಕ್ಷಕ ರಾದ ಶ್ರೀ ಡಿ.ಎಸ್. ನಾಗರಾಜು ಸಾಹಿತಿಗಳ ಪರಿಚಯ ಮಾಡಿಕೊಟ್ಟರು. ಶ್ರೀ ಸೋಮಶೇಖರ್ ನಿರೂಪಣೆ ಮಾಡಿದರು.





## ಹಸಿರು–ತುಮಕೂರು ಅಂಗವಾಗಿ ಹಸಿರು ಉತ್ಸವ ಜನಾಂದೋಲನ

ಅಭಿವೃದ್ಧಿ ರೆವೆಲ್ಯೂಷನ್ ಫೋರಂ(ರಿ.), ಗ್ರೀನ್ ಬ್ಯಾಂಕ್ ಹಾಗೂ ಹಸಿರು ಕಾರ್ಯಪಡೆ ಮತ್ತು ಶ್ರೀ ಸಿದ್ಧಗಂಗಾಮಠ ಇವರ ಸಂಯುಕ್ತ ಆಶ್ರಯದಲ್ಲಿ ಹಸಿರು ತುಮಕೂರು ಅಂಗವಾಗಿ ಶ್ರೀ ಸಿದ್ಧಗಂಗಾಮಠದಲ್ಲಿ ದಿನಾಂಕ ೧೯–೧೧–೨೦೧೧ರ ಶನಿವಾರ ಹಮ್ಮಿಕೊಂಡಿದ್ದ ಹಸಿರು ಉತ್ಸವ ಜನಾಂದೋಲನ ಕಾರ್ಯಕ್ರಮದಲ್ಲಿ ಶ್ರೀ ಸಿ.ಪಿ. ಯೋಗೀಶ್ವರ ಗಿಡ ಬೆಳೆಸುವ ಕುರಿತು ಪ್ರಮಾಣ ವಚನ ಬೋಧಿಸಿದರು. ನಂತರ ಮಾತನಾಡಿ ಪರಿಸರ ಸಂರಕ್ಷಿಸುವ ನಿಟ್ಟಿನಲ್ಲಿ ಯುವಸಮೂಹ ಎಚ್ಚೆತ್ತುಕೊಂಡು ಒಂದೊಂದು ಗಿಡ ಬೆಳೆಸುವ ಕಾರ್ಯದಲ್ಲಿ ತೊಡಗಬೇಕು ಎಂದು ಕರೆ ನೀಡಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀ ಸಿದ್ಧಗಂಗಾಮಠದ ಅಧ್ಯಕ್ಷರಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಾ, ಇಂದಿನ ಯುವ ಜನಾಂಗ ಪರಿಸರ ಪ್ರೇಮ ಬೆಳೆಸಿಕೊಂಡು ಗಿಡಮರಗಳನ್ನು ಬೆಳೆಸುವ ಮೂಲಕ ಶಾಲಾ ಆವರಣದಲ್ಲಿ ಸುಂದರ ಉದ್ಯಾನವನ ನಿರ್ಮಿಸಬೇಕು. ಇತ್ತೀಚಿನ ದಿನಗಳಲ್ಲಿ ಪರಿಸರ ಮಾಲಿನ್ಯ ಹೆಚ್ಚುತ್ತಿದ್ದು ಜನಸಾಮಾನ್ಯರ ಬದುಕಿನ ಮೇಲೆ ತೀವ್ರತರ ದುಷ್ಪರಿಣಾಮಗಳು ಬೀರುತ್ತಿದ್ದು ಗಿಡಮರಗಳನ್ನು ಬೆಳೆಸುವ ಮೂಲಕ ನಮ್ಮ ಅಮೂಲ್ಯ ಪರಿಸರವನ್ನು ಸಂರಕ್ಷಿಸುವ ನಿಟ್ಟೀನಲ್ಲಿ ಯುವ ಜನಾಂಗ ಚಿಂತನೆ ಮಾಡಬೇಕೆಂದು ಆಶಿಸಿದರು. ಸಮಾರಂಭದಲ್ಲಿ ಉಪಸ್ಥಿತದಿದ್ದ ಪರಮಪೂಜ್ಯ ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತ, 'ಹಸಿರು ಉಳಿದರೆ ಉಸಿರು ಉಳಿಯಲು ಸಾಧ್ಯ'. ವಿದ್ಯಾವಂತ ಸಮೂಹವು ಜಾಗೃತರಾಗಿ ಅರಣ್ಯ ಸಂಪತ್ತನ್ನು ಮತ್ತು ವೈವಿಧ್ಯ ಜೀವಿ ಸಂಕುಲವನ್ನು ಉಳಿಸಿ ಬೆಳೆಸಿ ಮುಂದಿನ ಪೀಳಿಗೆಗೆ ಬಳುವಳಿಯಾಗಿ ನೀಡಿ ಎಂದು ಕರೆ ನೀಡಿದರು.

ಈ ಕಾರ್ಯಕ್ರಮದಲ್ಲಿ ಜಿಲ್ಲಾಧಿಕಾರಿ ಡಾ॥ ಸಿ. ಸೋಮಶೇಖರ್, ಸಂಸದ ಶ್ರೀ ಜಿ.ಎಸ್. ಬಸವರಾಜು, ನಗರ ಸಭೆ ಆಯುಕ್ತರಾದ ಶ್ರೀಮತಿ ಸಾವಿತ್ರಿವಾಮನರಾವ್, ಶ್ರೀ ಕುಂದರನಹಳ್ಳಿ ರಮೇಶ್ ಮುಂತಾದವರಿದ್ದರು.

ವರದಿ : ಕೆ.ಬಿ. ಶಿವಶಂಕರ್, ಸ.ಶಿ. ಶ್ರೀಮಠ.

ನೀನು ಸುಧಾರಕನೆನಿಸಬೇಕಾದರೆ ನಿನ್ನಲ್ಲಿ ಮೂರು ಗುಣಗಳು ಮುಖ್ಯವಾಗಿ ಬೇಕು. ಮೊದಲನೆಯದಾಗಿ ಸುಧಾರಣೆಯ ಕಳಕಳಿ ನಿನ್ನ ಮನಸ್ಸಿನಲ್ಲಿ ಮೂಡಬೇಕು. ನಿನ್ನ ಸೋದರನ ಬಗ್ಗೆ ನಿನಗೆ ಮರುಕವಿದೆಯೆ? ಜಗತ್ತಿನಲ್ಲಿ ದುಃಖ ಅಜ್ಞಾನ ಮೌಢ್ಯ ತುಂಬಿದೆಯೆಂದು ನಿನಗೆ ನಿಜವಾಗಿಯೂ ಮನವರಿಕೆಯಾಗಿದೆಯೇ? ಮನುಷ್ಯರೆಲ್ಲ ಬಂಧುಗಳೆಂಬ ಭಾವನೆ ನಿನ್ನ ಮನಸ್ಸಿನಲ್ಲಿ ತುಂಬಿಕೊಂಡಿದೆಯೇ? ನಿನ್ನ ದೇಹದ ರಕ್ತದ ಪ್ರತಿಕಣದಲ್ಲಿಯೂ ಆ ವಿಚಾರ ಹರಿದಾಡುತ್ತಿದೆಯೇ? ಆದರ್ಶವೇ ನಿನ್ನ ವ್ಯಕ್ತಿತ್ವದ ತಳಹದಿಯಾಗಿದೆಯೇ?

ಅನುಕಂಪದ ಭಾವನೆ ನಿನ್ನಲ್ಲಿ ಆಳವಾಗಿ ಬೇರೂರಿದ್ದರೆ ಪರಿಹಾರವನ್ನು ಕಂಡು ಹಿಡಿಯಲು ನೀನು ಪ್ರಯತ್ನಕ್ಕೆ ತೊಡಗು. ಹಳೆಯ ವಿಚಾರಗಳಿಗೆ ಮೌಢ್ಯತೆಯ ಗೆದ್ದಲು ಹಿಡಿದಿರಬಹುದು. ಆದರೆ ಆ ಪುರಾತನ ಹುತ್ತದಲ್ಲಿಯೇ ಹೊನ್ನಿನ ಕಣಗಳಿವೆಯೆಂಬುದನ್ನು ನೀನು ಮರೆಯಬೇಡ. ಹೊನ್ನನ್ನು ಶೋಧಿಸಿ ತೆಗೆಯುವಾಗ ಮಣ್ಣು ಬಾರದಂತೆ ನೋಡಿಕೊಳ್ಳುವುದು ನಿನ್ನ ಕೆಲಸ.

ನೀನು ಇಷ್ಟೆಲ್ಲವನ್ನೂ ಮಾಡುತ್ತಿರುವುದು ಯಾವ ಉದ್ದೇಶ ಸಾಧನೆಗಾಗಿ? ಕೀರ್ತಿ, ಐಶ್ವರ್ಯ, ಅಧಿಕಾರಗಳ ದುರಾಸೆಯಿಂದ ಸಾಗಿಲ್ಲವೆಂದು ನೀನು ಹೇಳಬಲ್ಲೆಯಾ? ಇಡೀ ಜಗತ್ತೇ ಒಂದಾಗಿ ನಿನ್ನನ್ನು ತುಳಿಯಬೇಕೆಂದು ಬಂದರೂ ನೀನು ನಿನ್ನ ಅದರ್ಶಕ್ಕೇ ಅಂಟಿಕೊಂಡು ಭದ್ರವಾಗಿ ನಿಲ್ಲುವೆಯಾ? ನಿನ್ನ ಜೀವ ಕೊನೆಗೊಳ್ಳುವುದು ಖಂಡಿತವೆನಿಸಿದಾಗಲೂ ನೀನು ಮಾಡತಕ್ಕ ಕಾರ್ಯವನ್ನು ಮಾಡಬಲ್ಲೆಯಾ?

ಹಾಗಾದರೆ ಮಾತ್ರ ನೀನು ಗುರು, ಶಿಕ್ಷಕ, ಸುಧಾರಕ, ಮಾನವಕೋಟಿಗೆ ನಿನ್ನ ಜೀವಿತವು ಒಂದು ಶ್ರೇಷ್ಠ ವರಪ್ರಸಾದ.

–ಸ್ವಾಮಿ ವಿವೇಕಾನಂದ

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಸೌಹಾರ್ದ ಪತ್ತಿನ ಸಹಕಾರಿ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103.

| | | |
|---|---|---|
| ಸದಸ್ಯರ ಸಂಖ್ಯೆ | : | 1554 |
| ಷೇರು ಮೊಬಲಗು | : | ರೂ. 49,52,100-00 |
| ವಾರ್ಷಿಕ ವಹಿವಾಟು | : | 10.48 ಕೋಟಿ |

*ಖಾಯಂ ಠೇವಣಿ ಮೇಲಿನ ಬಡ್ಡಿ*

| | |
|---|---|
| 46 ದಿನಗಳಿಂದ 1 ವರ್ಷಕ್ಕೆ 7% | 1 ವರ್ಷದಿಂದ 2 ವರ್ಷಕ್ಕೆ 8% |
| 2 ವರ್ಷದಿಂದ 3 ವರ್ಷಕ್ಕೆ 8% | 3 ವರ್ಷಕ್ಕೆ ಮೇಲ್ಪಟ್ಟು 9% |

*ಸದಸ್ಯರುಗಳಿಗೆ ಸಾಲದ ಸೌಲಭ್ಯ : ರೂ. 3,00,000 ಗಳವರೆಗೆ*

ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು
ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ
ಅಧ್ಯಕ್ಷರು

ಶ್ರೀ ಸಿ. ಮೋಹನ್‌ಕುಮಾರ್
ಕಾರ್ಯದರ್ಶಿ

*ಸ್ಥಾಪನೆ : 1995* *ಶುಭಾಶಯಗಳೊಂದಿಗೆ* *ದೂರವಾಣಿ: 2277267*

*ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ* *ಫ್ಯಾಕ್ಸ್: 2277267*

## ಶ್ರೀ ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ.ಹೆಚ್. ರಸ್ತೆ, ತುಮಕೂರು-572 103.

ಪ್ರಗತಿ ನೋಟ (31-03-2011ರಲ್ಲಿದ್ದಂತೆ) ಮತ್ತು ಠೇವಣಿಗಳು

| | | | |
|---|---|---|---|
| ಸದಸ್ಯರ ಸಂಖ್ಯೆ | 3765 | ಸಾಲಗಳು | 3705.51 |
| ಪಾವತಿಯಾದ ಷೇರು ಬಂಡವಾಳ | 202.96 | ಹೂಡಿಕೆಗಳು | 1739.02 |
| ಆಪದ್ಧನ ಮತ್ತು ನಿಧಿಗಳು | 463.24 | ದುಡಿಯುವ ಬಂಡವಾಳ | 5652.11 |
| ಠೇವಣಿಗಳು | 4985.91 | ನಿವ್ವಳ ಲಾಭ (ತೆರಿಗೆ ನಂತರ) | 54.39 |

ಠೇವಣಿ ಮೇಲಿನ ಬಡ್ಡಿದರಗಳು

| | |
|---|---|
| 46 ದಿವಸಗಳಿಂದ 90 ದಿವಸಗಳವರೆಗೆ | - ಶೇ. 6 |
| 91 ದಿವಸಗಳಿಂದ 180 ದಿವಸಗಳವರೆಗೆ | - ಶೇ. 8 |
| 181 ದಿವಸಗಳಿಂದ 365 ದಿವಸಗಳವರೆಗೆ | - ಶೇ. 9 |
| 1 ಮೇಲ್ಪಟ್ಟು 2 ವರ್ಷದವರೆಗೆ | - ಶೇ.10 |
| 2 ಮೇಲ್ಪಟ್ಟು 3 ವರ್ಷದವರೆಗೆ | - ಶೇ.11 |
| 3 ಮೇಲ್ಪಟ್ಟು | - ಶೇ. 9 |

ಹಿರಿಯ ನಾಗರಿಕರಿಗೆ, ವಿಧವೆಯರಿಗೆ, ಧರ್ಮದತ್ತಿ ಸಂಸ್ಥೆಗಳಿಗೆ, ಅಂಗವಿಕಲರಿಗೆ, ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ 1/2% ಅಧಿಕ ಬಡ್ಡಿ ದರವನ್ನು ಅವರ ಠೇವಣಿಗಳ ಮೇಲೆ ನೀಡಲಾಗುವುದು. ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ) ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ, ಅಡಮಾನ ಸಾಲ, ಹೊಸ/ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ, ವಸ್ತು ಬಳಕೆದಾರರ ಸಾಲ, ಮೀರೆಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 14

### ನೂತನ ಶಾಖೆಗಳು

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ,
ಬಿ.ಹೆಚ್. ರಸ್ತೆ, ತುಮಕೂರು.ದೂ: 0816-2277273

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಹಾಸ್ಪಿಟಲ್ ರಸ್ತೆ, ಡಾಬಸ್‌ಪೇಟೆ(ಸೋಂಪುರ) ನೆಲಮಂಗಲ ತಾ,
ಬೆಂ.ಗ್ರಾ.ಜಿಲ್ಲೆ. ದೂ: 0816-7735409

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

ಶ್ರೀ ಹೆಚ್.ಕೆ. ಶಿವಪ್ರಕಾಶ್
ವ್ಯವಸ್ಥಾಪಕರು

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ನೈಸ್ ಸಂಸ್ಥೆಯ ಮುಖ್ಯಸ್ಥ ಶ್ರೀ ಅಶೋಕ್ ಖೇಣಿರವರ 62ನೇ ಹುಟ್ಟುಹಬ್ಬವನ್ನು ಬೀಜಾಪುರದಲ್ಲಿ ಸಂಭ್ರಮದಿಂದ ಆಚರಿಸಲಾಯಿತು. ಪೂಜ್ಯ ಶ್ರೀ ಶ್ರೀ ಗಳವರ ಸಾನ್ನಿಧ್ಯದಲ್ಲಿ ಪೇಜಾವರ ಶ್ರೀಗಳವರು ಸನ್ಮಾನಿಸಿ ಆಶೀರ್ವದಿಸಿದರು



ನೂತನ ಪೊಲೀಸ್ ಮಹಾನಿರ್ದೇಶಕರಾದ ಶ್ರೀ ಶಂಕರ್ ಬಿದರಿ ದಂಪತಿಗಳು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರಿಂದ ದಿವ್ಯಾಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು.



ಉದ್ಯೋಗ ಮತ್ತು ತರಬೇತಿಯ ಇಲಾಖೆಯ ಮಾಜಿ ಜಂಟಿ ನಿರ್ದೇಶಕರಾದ ಶ್ರೀ ಬಿ.ಎಸ್. ರಘುಪತಿಯವರು ಶ್ರೀಮಠಕ್ಕೆ ಭೇಟಿ ನೀಡಿ ಪೂಜ್ಯ ಶ್ರೀಗಳವರಿಂದ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಜಂಟಿ ನಿರ್ದೇಶಕರಾದ ಶ್ರೀ ಕೆ. ರಾಮಚಂದ್ರಪ್ಪ ಮೊದಲಾದ ಅಧಿಕಾರಿಗಳು ಉಪಸ್ಥಿತರಿದ್ದರು



ಗಣರಾಜ್ಯೋತ್ಸ ಪಥನ ಸಂಚಲನದ ಪೂರ್ವ ಆಯ್ಕೆ ತಿರುವನಂತಪುರದಲ್ಲಿ ನಡೆಯಲ್ಲಿದ್ದು ತುಮಕೂರು ಸಿದ್ಧಗಂಗಾ ಪದವಿ ಕಾಲೇಜಿನಿಂದ ಆಯ್ಕೆಯಾದ ವಿದ್ಯಾರ್ಥಿಗಳು ಪೂಜ್ಯ ಶ್ರೀಗಳವರಿಂದ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಕಾಲೇಜಿನ ಸಿಬ್ಬಂದಿ ವರ್ಗದವರು ಹಾಜರಿದ್ದರು.



ಸಿದ್ಧಗಂಗಾ ಬಾಲಕರ ಪದವಿಪೂರ್ವ ಕಾಲೇಜಿನ ವಾರ್ಷಿಕ ಸಮಾರಂಭ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಈ ಸಂದರ್ಭದಲ್ಲಿ ವಿಧಾನ ಪರಿಷತ್ ಮುಖ್ಯ ಸಚೇತಕ ಶ್ರೀ ಶಿವಯೋಗಿಸ್ವಾಮಿ, ಪ್ರೊ. ಜಿ.ಎಸ್. ಬಸವರಾಜು, ಶ್ರೀ ಶಶಿಧರ್ ಮೊದಲಾದವರು ಉಪಸ್ಥಿತರಿದದರು



ಪಂಡಿತ ಪುಟ್ಟರಾಜ ಗವಾಯಿಗಳವರ ಪುಣ್ಯಸ್ಮರಣೆ ಅಂಗವಾಗಿ ತುಮಕೂರಿನಲ್ಲಿ ನಡೆದ ರಾಜ್ಯಮಟ್ಟದ ಅಂಧಮಕ್ಕಳ ಸಂಗೀತ ಕಾರ್ಯಕ್ರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯಿತು. ಈ ಸಂದರ್ಭದಲ್ಲಿ ತುಮಕೂರು ಹಿರೇಮಠದ ಶ್ರೀಗಳು ಮೊದಲಾದವರು ಉಪಸ್ಥಿತರಿದ್ದರು

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bangalore-10. Ph : 23404232